ಕುರ್‌ಆನ್ ಮತ್ತು ಪ್ರವಾದಿ ಚರ್ಯೆಯ ತತ್ವಾದರ್ಶಗಳನ್ನು ಸಾರುವ

# ಪವಿತ್ರ ಸಂದೇಶ

ಕನ್ನಡ ಪಾಕ್ಷಿಕ

**ಚಂದಾದರ ವಿವರ**

| | | |
|---|---|---|
| **ದೇಶ** | | |
| ವಾರ್ಷಿಕ | ₹ | 250-00 |
| ಅರ್ಧ ವಾರ್ಷಿಕ | ₹ | 150-00 |
| ಬಿಡಿ ಪ್ರತಿ | ₹ | 10-00 |
| **ಗಲ್ಫ್ ರಾಷ್ಟ್ರಗಳಿಗೆ** | | |
| ವಾರ್ಷಿಕ | ₹ | 2,000-00 |
| ಅರ್ಧ ವಾರ್ಷಿಕ | ₹ | 1,000-00 |

❖ ಸಂಪುಟ: 18 ❖ ಸಂಚಿಕೆ: 22 ❖ ಪುಟ: 12 ❖ ನವೆಂಬರ್ 16-30, 2014 ❖ ಬೆಲೆ: ₹ 10/-

http://www.salafimangalore.org

# ಸಲಫ್‌ಗಳ ಮಾರ್ಗವನ್ನು ಬೇಷರತ್ತಾಗಿ ಅನುಸರಿಸಿರಿ

## ಶೈಖ್ ಅಬ್ದುರ್ ರಹ್ಮಾನ್ ಸುದೈಸಿ



ಮುಹರ್ರಮ್ ತಿಂಗಳ ಮೊದಲ ಶುಕ್ರವಾರ ಮಕ್ಕಾದ ಹರಮ್ ಶರೀಫ್‌ನಲ್ಲಿ ಎರಡು ಹರಮ್‌ಗಳ ಮುಖ್ಯಸ್ಥರಾದ ಶೈಖ್ ಅಬ್ದುರ್ ರಹ್ಮಾನ್ ಸುದೈಸಿಯವರು ನಿರ್ವಹಿಸಿದ ಕುತುಬಾದ ಸಾರಾಂಶ ಇಲ್ಲಿ ಕೊಡಲಾಗಿದೆ. —ಸಂ.

ಓ ಸತ್ಯವಿಶ್ವಾಸಿಗಳೇ, ಅಲ್ಲಾಹನ ಗ್ರಂಥವಾದ ಕುರ್‌ಆನ್ ಹಾಗೂ ನಮ್ಮ ನೇತಾರರಾದ ಮುಹಮ್ಮದ್(ಸ)ರವರ ಚರ್ಯೆಯನ್ನು ಬೇಷರತ್ತಾಗಿ ಅನುಸರಿಸುವುದು ನಮ್ಮೆಲ್ಲರ ಮೇಲಿರುವ ಕಡ್ಡಾಯ ಕರ್ತವ್ಯವಾಗಿದೆ. ಪ್ರವಾದಿಯವರ ಹೊರತಾದ ಯಾರದೇ ಮಾತಿನಲ್ಲಿ ಸ್ವೀಕರಿಸುವಂತಹದೂ ತಿರಸ್ಕರಿಸುವಂತಹದೂ ಇದೆ. ಆ ಪ್ರವಾದಿಯ ಆಶಯ-ಆದರ್ಶಗಳನ್ನು ಯಾವ ರೀತಿ ಸಚ್ಚರಿತರಾದ ಸಲಫ್‌ಗಳು ಅಂಗೀಕರಿಸಿ ನಮಗೆ ಮಾರ್ಗದರ್ಶನ ನೀಡಿರುವರೋ ಅದೇ ರೀತಿ ನಾವು ಅಂಗೀಕರಿಸಬೇಕು. ಸಲಫ್‌ಗಳ ಮಾರ್ಗವು ನೈಜ ಇಸ್ಲಾಮಿನ ಪ್ರತಿಫಲನವಾಗಿದೆ. ಇದಕ್ಕೆ ಯಾವುದೇ ಸ್ಥಳ ಅಥವಾ ಸಮಯದ ವ್ಯತ್ಯಾಸವಿಲ್ಲ. ಎಲ್ಲಾ ಕಾಲಕ್ಕೂ ಅನ್ವಯವಾಗುವಂತಹದಾಗಿದೆ. ಇದು ಪ್ರವಾದಿ (ಸ) ಮತ್ತು ಪೂರ್ವಿಕ ಸತ್ಯವಿಶ್ವಾಸಿಗಳಲ್ಲೊಳಪಟ್ಟ ಅನ್ಸಾರ್‌ಗಳು ಮತ್ತು ಮುಹಾಜಿರ್‌ಗಳಾದ ಸಲಫು ಸ್ವಾಲಿಹೀನ್‌ಗಳ ಹೆಜ್ಜೆಗಳನ್ನನುಸರಿಸಿರುವ ಜೀವನದ ಮಾರ್ಗಸೂಚಿಯಾಗಿದೆ. ಮಾತ್ರವಲ್ಲ ಇದು ಪ್ರವಾದಿ(ಸ)ರವರ ಅನುಸರಣೆಯೂ ಆಗಿರುತ್ತದೆ.

ಏಕೆಂದರೆ ಪ್ರವಾದಿ(ಸ)ರವರು ಹೇಳಿದ್ದಾರೆ: "ನಿಮ್ಮ ನಡುವೆ ಜೀವಿಸುವವರು ಅತ್ಯಧಿಕ ಭಿನ್ನಾಭಿಪ್ರಾಯವನ್ನು ಕಾಣುವರು. ಆ ಸಂದರ್ಭದಲ್ಲಿ ನೀವು ನನ್ನ ಸುನ್ನತ್ತನ್ನು ಮತ್ತು ಉತ್ತಮ ಮಾರ್ಗದರ್ಶಕರಾದ ಖುಲಫಾ ಉರ್ರಾಶಿದೀನ್‌ಗಳ ಮಾರ್ಗವನ್ನು ಬಲವಾಗಿ ಹಿಡಿದುಕೊಳ್ಳಿರಿ" ಎಂದು ಧರ್ಮದಲ್ಲಿ ಹೊಸತನ್ನು ಸೃಷ್ಟಿಸುವವರಿಂದ ದೂರವಿರಿ. ಯಾಕೆಂದರೆ ಎಲ್ಲಾ ಹೊಸ ಆಚಾರಗಳು ಸನ್ಮಾರ್ಗದಿಂದ ಪಥಭ್ರಷ್ಟತೆಗೊಂಡವುಗಳಾಗಿವೆ ಮತ್ತು ಎಲ್ಲಾ ಪಥಭ್ರಷ್ಟತೆಗಳು ಕೊನೆಗೊಳ್ಳುವುದು ನರಕಾಗ್ನಿಯಲ್ಲಾಗಿದೆ. ಈ ಕುರಿತು ಶೈಖುಲ್ ಇಸ್ಲಾಮ್ ಇಬ್ನುತೈಮಿಯಾ(ರ)ರವರುತನ್ನ ಗ್ರಂಥದಲ್ಲಿ ಸುಂದರವಾಗಿ ವಿವರಿಸಿದ್ದಾರೆಂದು ಸುದೈಸಿ ತನ್ನ ಕುತುಬಾದಲ್ಲಿ ನೆನಪಿಸಿದರು. ಅವರು ಮುಂದುವರಿದು, ಹೊಸ ಬದಲಾವಣೆ ಎಂದರೆ ಧಾರ್ಮಿಕ ವಿಚಾರಗಳಲ್ಲಿ ಮಾತ್ರವಾಗಿದೆ ಹೊರತು ಆಧುನಿಕ ವಿಜ್ಞಾನ ಮತ್ತು ತಾಂತ್ರಿಕತೆಗಳಿಗೆ ಅನ್ವಯಿಸುವುದಿಲ್ಲ ಎಂದರು. ಅದೇ ರೀತಿ ಪ್ರವಾದಿ (ಸ)ರವರು ವಿರೋಧಿಸಿದ ಮತ್ತು ನಿಷೇಧಿಸಿದ ಕಾರ್ಯಗಳಲ್ಲಿ ಮಗ್ನರಾಗಿರುವವರು ಪರಲೋಕದ ಬಗ್ಗೆ ಚಿಂತಿಸಬೇಕಾಗಿದೆ. ಪ್ರವಾದಿ ಬೋಧನೆಗೆ ವಿರುದ್ಧವಾದವುಗಳನ್ನು ಸಂಪೂರ್ಣ ತ್ಯಜಿಸಬೇಕಾಗಿದೆ.

ಕಿಂಗ್‌ಡಮ್ ಆಫ್ ಸೌದಿ ಅರೇಬಿಯಾವು ಸಲಫ್‌ಗಳ ಹೆಜ್ಜೆಗಳಲ್ಲಿ ಹಾಗೂ ಶೈಖ್ ಮುಹಮ್ಮದ್ ಬಿನ್ ಅಬ್ದುಲ್ ವಹ್ಹಾಬ್‌ರವರ ಪ್ರಮಾಣಬದ್ಧವಾದ ತೌಹೀದ್ ಹಾಗೂ ರಿಸಾಲತ್‌ಗಳ ಹಾದಿಯಲ್ಲಿ ಮುನ್ನಡೆಯುತ್ತಿದೆ.

ಇಬ್ನ್ ಅಬ್ದುಲ್ ವಹ್ಹಾಬ್ ತನ್ನ ಬೋಧನೆಯ ಮೂಲಕ ಜನರನ್ನು ಸಂಸ್ಕರಿಸಿದ ಮಹಾನುಭಾವರಾಗಿದ್ದಾರೆ. ಅವರು ಶಿರ್ಕ್ ಹಾಗೂ ನವೀನಾಚಾರಗಳ ವಿರುದ್ಧ ಹೋರಾಡಿದವರು. ಶೈಖ್‌ರವರು ಯಾವುದೇ ಹೊಸ ಸಿದ್ಧಾಂತಕ್ಕೆ ಜನರನ್ನು ಆಹ್ವಾನಿಸಿದ್ದಲ್ಲ. ಅವರು ಆಹ್ವಾನಿಸಿದ್ದು ಪ್ರವಾದಿ(ಸ)ರವರ ನೈಜ ಚರ್ಯೆಯ ಕಡೆಗಾಗಿದೆ. ಅದನ್ನು ಅರ್ಥೈಸಿ ನಡೆದ ಸಲಫ್‌ಗಳ ದಾರಿಯ ಕಡೆಗಾಗಿದೆ. ಅವರ ಬೋಧನೆಗಳನ್ನು "ತಕ್‌ಫೀರ್ ಸಿದ್ಧಾಂತ"ವೆಂದೂ "ಖವಾರಿಜ್‌ಗಳ ಆಚಾರ"ವೆಂದೂ ದೂಷಿಸುವವರ ಆಕ್ಷೇಪಗಳಿಗೆ ಯಾವುದೇ ಆಧಾರವಿಲ್ಲ. ಇದು ಅವರ ಮೇಲೆ ಹೊರಿಸುವ ಸುಳ್ಳಾರೋಪವೂ ಅವರ ಹೆಸರಿಗೆ ಮಸಿ ಬಳಿಯುವಂತಹ ಕೃತ್ಯವೂ ಆಗಿದೆ. ಅವರ ಶತ್ರುಗಳು ಇದು "ವಹ್ಹಾಬಿಸಮ್" ಎಂದು ಕರೆದರು. ಯಾರು ಏನೇ ಹೇಳಿದರೂ ಸಲಫ್‌ಗಳ ಮಾರ್ಗವೇ ನೈಜ ಇಸ್ಲಾಮ್ ಎಂದು ಶೈಖ್ ಅಬ್ದುಲ್ ರಹ್ಮಾನ್ ಸುದೈಸಿ ವಿವರಿಸಿದರು. ●

# ಕೆ.ಎನ್.ಎಮ್. ಅಧ್ಯಕ್ಷರಾಗಿ ಟಿ.ಪಿ. ಅಬ್ದುಲ್ಲಾಹ್ ಕೋಯ ಮದನಿ ಮತ್ತು ಪ್ರಧಾನ ಕಾರ್ಯದರ್ಶಿಯಾಗಿ ಉನ್ನಿನ್ ಕುಟ್ಟಿ ಮೌಲವಿ ಆಯ್ಕೆ

ಕೋಝಿಕೋಡ್: ಕೇರಳ ನದ್ವತ್ತುಲ್ ಮುಜಾಹಿದೀನ್ (ಕೆ.ಎನ್.ಎಮ್)ನ ರಾಜ್ಯಾಧ್ಯಕ್ಷರಾಗಿ ಟಿ.ಪಿ. ಅಬ್ದುಲ್ಲಾಹ್ ಕೋಯ ಮದನಿ ಮತ್ತು ಪ್ರಧಾನ ಕಾರ್ಯದರ್ಶಿಯಾಗಿ ಪಿ.ಪಿ. ಉನ್ನಿನ್ ಕುಟ್ಟಿ ಮೌಲವಿಯವರು ಪುನಃರಾಯ್ಕೆಯಾಗಿದ್ದಾರೆ.

ಪುಳಿಕಲ್ ಜಾಮಿಯಾ ಸಲಫಿಯ್ಯಾ ಅಡಿಟೋರಿಯಮ್‌ನಲ್ಲಿ ಸೇರಿದ ಕೆ.ಎನ್.ಎಂ.ನ ರಾಜ್ಯ ಕೌನ್ಸಿಲ್‌ನ ಸಭೆಯಲ್ಲಿ ಐದು ವರ್ಷಗಳ ಅವಧಿಗೆ ಪದಾಧಿಕಾರಿಗಳನ್ನು ಸರ್ವಾನುಮತದಿಂದ ಆಯ್ಕೆ ಮಾಡಲಾಯಿತು.



ಹೊಸ ಆಡಳಿತ ಸಮಿತಿಯ ಪದಾಧಿಕಾರಿಗಳಾಗಿ ನೂರ್ ಮುಹಮ್ಮದ್ ನೂರಿಷಾ, ಎಮ್. ಮುಹಮ್ಮದ್ ಮದನಿ, ಪಿ.ವಿ. ಹಸನ್ ಸಾಹೇಬ್, ಪಿ.ಕೆ. ಕುಂಞಬ್ದುಲ್ಲಾಹ್ ಹಾಜಿ ಎಲಾಂಕೋಡ್, ಪಿ.ಕೆ. ಅಹ್ಮದ್ ಸಾಹೇಬ್, ಹೆಚ್.ಇ. ಮುಹಮ್ಮದ್ ಬಾಬು ಸೇಠ್, ಡಾ| ಎಲ್.ಎ. ಮನ್ಸೂರ್, ಪಾಲತ್ ಅಬ್ದುಲ್ ರಹ್ಮಾನ್ ಮದನಿ, ಎಮ್. ಅಬ್ದುಲ್ ರಹ್ಮಾನ್ ಸಲಫಿ, ಎಂ.ಟಿ ಅಬ್ದುಸ್ಸಮದ್ ಸುಲ್ಲಮಿ, ಸಿ.ಸಿ. ಸಲೀಮ್, ಪಿ.ಕೆ. ಮುಹಮ್ಮದ್., ಎನ್. ಮುಹಮ್ಮದ್ ಕುಂಞಪ್ಪ ಮಾಸ್ಟರ್, ಪಿ.ಕೆ. ಮುಹಮ್ಮದ್ ಮದನಿ, ಪಿ.ಕೆ. ಅಬ್ದುಲ್ಲಾಹ್ ಹಾಜಿ, ವಿ.ಎ. ಅಬ್ದುಸ್ಸಲಾಮ್ ಮಾಸ್ಟರ್, ಕೆ.ಎಮ್.ಕೆ. ದೇವರ್‌ಶೋಲ, ಟಿ.ಹೆಚ್. ನಸೀರ್, ಎನ್.ಎ.ಎಮ್. ಇಸ್ಹಾಕ್ ಮೌಲವಿ, ನಾಸರ್ ಸುಲ್ಲಮಿ ಎಡತ್ತನಾಟುಕರೆ, ಕೆ. ಸಿದ್ದೀಖ್ ಅನ್ಸಾರ್, ಎನ್.ವಿ. ಹಾಶಿಮ್ ಹಾಜಿ, ಅಬ್ದುಲ್ ಹಕೀಮ್, ಎಮ್.ಎಸ್. ಅಬ್ದುಲ್ಲಾಹ್, ಇ.ಎಮ್. ಸುಲೈಮಾನ್ ಇವರನ್ನು ಆಯ್ಕೆಗೊಳಿಸಲಾಯಿತು.



ಸಂಪಾದಕೀಯ

بِسْمِ اللّٰهِ الرَّحْمٰنِ الرَّحِيْمِ

الحمد لله رب العالمين والصلاة والسلام على نبينا محمد وآله وصحبه أجمعين أما بعد

# ತಮ್ಮ ತಪ್ಪುಗಳನ್ನು ಮುಚ್ಚಿಟ್ಟು ಇತರರ ತಪ್ಪುಗಳನ್ನು ಎತ್ತಿ ಹೇಳುವ ನಷ್ಟಕೋರರು

ಜನರಲ್ಲಿ ಹೆಚ್ಚಿನವರು ಏನನ್ನಾದರೂ ಯಾರನ್ನಾದರೂ ದೂಷಿಸುವುದನ್ನೇ ಕಾಯಕವನ್ನಾಗಿ ಮಾಡಿಕೊಂಡಿದ್ದಾರೆ. ಇನ್ನು ಕೆಲವರು "ಅಲ್ಲಾಹು ನಮ್ಮನ್ನು ಕಷ್ಟದಲ್ಲಿ ಹಾಕಿದ್ದಾನೆ, ನಮ್ಮ ಕಷ್ಟವನ್ನು ಕೇಳುವವರಿಲ್ಲ, ಅಲ್ಲಾಹನೇ ಕೈ ಬಿಟ್ಟ ಮೇಲೆ ಬೇರೆ ಯಾರು ಕೇಳುತ್ತಾರೆ" ಎಂದು ಅಲ್ಲಾಹನ ಮೇಲೆ ಆರೋಪ ಹೊರಿಸುತ್ತಿರುತ್ತಾರೆ. ತಮ್ಮಲ್ಲಿ ಸಾಕಷ್ಟು ದುಷ್ಟತನ, ದುರ್ನಡತೆಗಳಿದ್ದರೂ ಕೂಡಾ ಇತರರ ನ್ಯೂನತೆಗಳನ್ನು ಎತ್ತಿ ಹೇಳುವುದರಲ್ಲೇ ಕಾಲ ಕಳೆಯುವವರು ಬಹಳಷ್ಟು ಮಂದಿಯಿದ್ದಾರೆ. ಹೆಚ್ಚಿನ ಮುಸ್ಲಿಮರಲ್ಲಿ, ಕ್ಷೇಮ ಸಮಾಚಾರ ಕೇಳಿದರೆ "ಅಲ್ ಹಮ್ದುಲಿಲ್ಲಾಹ್" ಅಥವಾ "ಸೌಖ್ಯ" ಎಂದು ಹೇಳುತ್ತಾರೆ. ಮಾತು ಮತ್ತಷ್ಟು ಮುಂದುವರಿಸಿದರೆ ಅಲ್ಲಾಹು ದಯಪಾಲಿಸಿದ ಅನುಗ್ರಹಗಳಿಗೆ ಸಂತೃಪ್ತಿ ವ್ಯಕ್ತ ಪಡಿಸುವ ಬದಲು, ಕಷ್ಟ, ನಷ್ಟ, ನಿರಾಶೆ ಮತ್ತು ದೂಷಣೆಗಳ ಮಾತುಗಳು ಹೊರ ಬರುವುದನ್ನು ಕಾಣಬಹುದು.

ತಮ್ಮ ಕಷ್ಟನಷ್ಟ, ಪರಾಜಯಗಳಿಗೆಲ್ಲಾ ಮಾತಾಪಿತರೇ ಕಾರಣವೆಂದು ದೂಷಿಸುವ ಅನೇಕರು ಸಮಾಜದಲ್ಲಿದ್ದಾರೆ. ಕೌಟುಂಬಿಕ ಸಮಸ್ಯೆಗಳಿಗೆಲ್ಲಾ ಕಾರಣ ತನ್ನ ಪತ್ನಿಯೆಂದು ಆರೋಪಿಸುವ ಪತಿಯಂದಿರೂ ಪತಿ ಕಾರಣವೆಂದು ಆರೋಪಿಸುವ ಪತ್ನಿಯರೂ ಸೊಸೆ ಕಾರಣವೆಂದು ಆರೋಪಿಸುವ ಅತ್ತೆ-ಮಾವಂದಿರೂ ಅತ್ತೆ ಕಾರಣವೆಂದು ಆರೋಪಿಸುವ ಸೊಸೆಯರೂ ಬಹಳಷ್ಟಿದ್ದಾರೆ. ಅದೇ ರೀತಿ ಪ್ರಾಯವಾದ ಮಾತಾ-ಪಿತರು ಮತ್ತು ಯುವಕರಾದ ಮಕ್ಕಳು ಪರಸ್ಪರ ದೂರುವ ಸನ್ನಿವೇಶಗಳು ಸರ್ವೇ ಸಾಮಾನ್ಯವಾಗಿದೆ. ಕೆಲವರು ಎಲ್ಲಾ ಗೊಂದಲಗಳಿಗೆ ನೆರೆಹೊರೆಯವರ ಮೇಲೆ ಅಥವಾ ಕುಟುಂಬದವರ ಮೇಲೆ ಆರೋಪ ಹೊರಿಸುವುದಿದೆ. ವ್ಯಾಪಾರದಲ್ಲಿ ನಷ್ಟವುಂಟಾದರೆ ಅಥವಾ ಮನೆಮಂದಿಗೆ ಖಾಯಿಲೆ ಬಂದರೆ ಅದು ತನ್ನ ಕುಟುಂಬದವರು ಅಥವಾ ನೆರೆಮನೆಯವರು ಮಾಟ ಮಾಡಿದ್ದೆಂದು ಭ್ರಮಿಸಿ ಮಂತ್ರವಾದಿಗಳ ಬಳಿಗೆ ಹೋಗಿ ಅವರು ಹೇಳುವುದನ್ನು ನಂಬಿ ಕುಟುಂಬದವರನ್ನೂ, ನೆರೆಹೊರೆಯವರನ್ನೂ ದೂರುತ್ತಾ, ಶಪಿಸುತ್ತಾ ತಮ್ಮ ಇಹ-ಪರಗಳನ್ನು ನಷ್ಟಗೊಳಿಸಿಕೊಳ್ಳುವ ಅನೇಕರಿದ್ದಾರೆ.

ಫೇಲಾದ ಅಥವಾ ಅಂಕ ಕಡಿಮೆಯಾದ ವಿದ್ಯಾರ್ಥಿಗಳು ಅಧ್ಯಾಪಕರನ್ನು ದೂಷಿಸುತ್ತಾರೆ. ರಾಜಕೀಯ ರಂಗದಲ್ಲಿ ಪ್ರತಿಯೊಬ್ಬರೂ ವಿರೋಧ ಪಕ್ಷದವರ ನ್ಯೂನತೆಗಳನ್ನು ಹುಡುಕಿ ಪ್ರಚಾರ ಮಾಡುವುದನ್ನೇ ತಮ್ಮ ಪ್ರಣಾಳಿಕೆಯಾಗಿ ಮಾಡಿಕೊಂಡಿದ್ದಾರೆ. ಈಗೀಗ ಈ ರೋಗವು ಧಾರ್ಮಿಕ ಸಂಘಟನೆಗಳೊಳಗೂ ಹರಡಿಕೊಂಡಿದೆ. ಇಸ್ಲಾಮ್ ಮತ್ತು ಮುಸ್ಲಿಮರಿಗೆ ಹಾನಿ ತಂದೊಡ್ಡಿದ್ದು ಅನ್ಯ ಮತೀಯರೆಂದು ಆರೋಪಿಸುವುದು ಬುಹುತೇಕ ಮುಸ್ಲಿಮ್ ಸಂಘಟನೆಗಳಿಗೊಂದು ಚಾಳಿಯಾಗಿದೆ. ತಂತಮ್ಮ ಧೋರಣೆಗಳಲ್ಲಿ ಏನಾದರೂ ದೋಷಗಳು ಸಂಭವಿಸಿವೆಯೋ ಎಂದು ಆತ್ಮಾವಲೋಕನ ನಡೆಸಲು ಯಾರೂ ಸಿದ್ಧರಿಲ್ಲ. ಮುಸ್ಲಿಮ್ ಸಮುದಾಯ ಮತ್ತು ಮುಸ್ಲಿಮ್ ರಾಷ್ಟ್ರಗಳು ಎದುರಿಸುತ್ತಿರುವ ಸಮಸ್ಯೆಗಳಿಗೆಲ್ಲಾ ಕಾರಣ ಇತರ ಸಮುದಾಯಗಳು ಮತ್ತು ರಾಷ್ಟ್ರಗಳು ಎಂಬುದು ಬಹುತೇಕ ಮುಸ್ಲಿಮ್ ಸಂಘಟನೆಗಳ ಆರೋಪ. ಅಲ್ಲಾಹನ ಆಜ್ಞೆಗಳನ್ನು ಪಾಲಿಸಿ ಜೀವಿಸಿದರೆ ಎಲ್ಲಾ ಶತ್ರುಗಳ ವಿರುದ್ಧ ಅಲ್ಲಾಹು ನಮಗೆ ಸಹಾಯ ಮಾಡುವನು. ಆದರೆ ಇಹದಲ್ಲೂ ಪರದಲ್ಲೂ ನಮಗೆ ಹಾನಿಕರವಾಗಿ ಬಾಧಿಸುವುದು ನಮ್ಮದೇ ಸ್ವಂತ ಕರ್ಮಗಳ ಫಲವಾಗಿದೆ. "ಒಳಿತಾಗಿ ನಿನಗೆ ಯಾವುದು ಲಭಿಸಿದರೂ ಅದು ಅಲ್ಲಾಹನ ವತಿಯಿಂದಾಗಿದೆ ಮತ್ತು ನಿನ್ನನ್ನು ಬಾಧಿಸುವ ಯಾವುದೇ ದೋಷವೂ ನಿನ್ನ ವತಿಯಿಂದಲೇ ಆಗಿದೆ (ಕುರ್‌ಆನ್ 4:79). "ಸತ್ಯವಿಶ್ವಾಸಿಗಳೇ, ನೀವು ನಿಮ್ಮ ಕಾರ್ಯಗಳನ್ನು ಗಮನಿಸಿಕೊಳ್ಳಿರಿ. ನೀವು ಸನ್ಮಾರ್ಗ ಹೊಂದಿದವರಾಗಿದ್ದರೆ ದುರ್ಮಾರ್ಗಿಗಳು ನಿಮಗೆ ಯಾವುದೇ ಹಾನಿಯನ್ನುಂಟು ಮಾಡಲಾರರು. ನಿಮ್ಮೆಲ್ಲರ ಮರಳುವಿಕೆಯು ಅಲ್ಲಾಹನ ಕಡೆಗಾಗಿದೆ. ನೀವು ಮಾಡುತ್ತಿರುವುದರ ಕುರಿತು ಆಗ ಅವನು ನಿಮಗೆ ವಿವರಿಸಿ ಕೊಡುವನು" (5:205).

ಪ್ರತಿಯೊಬ್ಬರೂ ತಂತಮ್ಮ ಬದುಕನ್ನು ಕೆಡುಕುಗಳಿಂದ ಮುಕ್ತಗೊಳಿಸಿ ಶುದ್ಧೀಕರಿಸಬೇಕೆಂದೂ ನಮಗೆ ಸಂಭವಿಸುವ ಕಷ್ಟ, ನಷ್ಟ, ಹಾನಿಗಳಿಗೆಲ್ಲಾ ಇತರರ ಮೇಲೆ ಆರೋಪ ಹೊರಿಸುವ ದುಷ್ಚಟವನ್ನು ನಮ್ಮಿಂದ ತೊಲಗಿಸಬೇಕೆಂದೂ ಮೇಲಿನ ಸೂಕ್ತಗಳಿಂದ ತಿಳಿಯಬಹುದಾಗಿದೆ. ನಾವು ನಿರಪರಾಧಿಗಳಾಗಿರುವಾಗ ಯಾರಾದರೂ ದುರುದ್ದೇಶಪೂರ್ವಕವಾಗಿ ನಮ್ಮನ್ನು ಆಕ್ರಮಿಸಿದರೆ ಖಂಡಿತ ಅಲ್ಲಾಹನ ಸಹಾಯ ನಮಗಿದೆ. ಆದರೆ ನಮ್ಮ ಕಡೆಯ ದುಷ್ಪ್ರವೃತ್ತಿಗಳ ಕಾರಣದಿಂದ ಶತ್ರುಗಳು ನಮ್ಮನ್ನು ಆಕ್ರಮಿಸುವುದಾದರೆ ಅಲ್ಲಾಹನ ಸಹಾಯವನ್ನು ನಿರೀಕ್ಷಿಸಲಾಗದು.

ಆದ್ದರಿಂದ ಇತರರೊಂದಿಗೆ ನಾವು ಮಾಡುವ ವ್ಯವಹಾರ, ಒಡನಾಟ ವರ್ತನೆಗಳು ಇಹದಲ್ಲೂ ಪರದಲ್ಲೂ ನಮಗೆ ಹಾನಿಕರವಾಗಿ ಪರಿಣಮಿಸದಿರಲಿಕ್ಕಾಗಿ ನಮ್ಮ ರೀತಿ-ನೀತಿ, ಸ್ವಭಾವ ಗುಣಗಳು ಪೂರ್ಣವಾಗಿಯೂ ದೋಷರಹಿತವಾಗಿರಬೇಕು. ಮಾತಾಪಿತರು ಮಕ್ಕಳ ಮೇಲಿನ ತಮ್ಮ ಬಾಧ್ಯತೆಗಳನ್ನು ಯಥಾವತ್ತಾಗಿ ನೆರವೇರಿಸಿದರೆ ಅಲ್ಲಾಹನ ಅನುಗ್ರಹ ಮತ್ತು ಸಹಾಯವನ್ನು ನಿರೀಕ್ಷಿಸಬಹುದಾಗಿದೆ. ಮಕ್ಕಳು ಅಡ್ಡದಾರಿಯನ್ನು ಆಯ್ಕೆ ಮಾಡಿ ಮಾತಾಪಿತರಿಗೆದುರಾದರೂ ಒಳ್ಳೆಯವರಾದ ಮಾತಾಪಿತರಿಗೆ ಅದು ಹಾನಿಕರವಾಗಿ ಬಾಧಿಸದು. ಇದೇ ರೀತಿಯಾಗಿದೆ ಇತರರೊಂದಿಗಿನ ಸಂಬಂಧದಲ್ಲಿ ತಮ್ಮ ಧೋರಣೆಯನ್ನು ಸಾಧ್ಯವಾದಷ್ಟು ಸರಿಪಡಿಸುವ ಪ್ರತಿಯೊಬ್ಬರ ಸ್ಥಿತಿ. ಆದ್ದರಿಂದ ನಮ್ಮ ಸಮಸ್ಯೆಗಳಿಗೆ ಇತರರು ಕಾರಣ ಎಂಬ ಚಿಂತನೆಯನ್ನು ಸತ್ಯವಿಶ್ವಾಸಿಗಳು ತ್ಯಜಿಸಲೇಬೇಕು. ಇಸ್ಲಾಮಿನ ದೃಷ್ಟಿಯಿಂದ ನಮ್ಮ ಸಮಸ್ಯೆ ನಮ್ಮ ಸ್ವಂತ ಕೆಡುಕುಗಳ ಫಲವಾಗಿದೆ.

ಆದ್ದರಿಂದ ಇತರರ ಮೇಲೆ ಆರೋಪ ಹೊರಿಸಿ ಗೀಬತ್ ಮಾಡುವುದನ್ನು ಬಿಟ್ಟು ತಮ್ಮ ಜೀವನದಲ್ಲಿ ಸಂಭವಿಸಿದ ಅಪರಾಧಗಳು ಮತ್ತು ತಮ್ಮಲ್ಲಿರುವ ದುರ್ಗುಣಗಳ ಬಗ್ಗೆ ಸ್ವತಃ ಚಿಂತಿಸಿ ಪಶ್ಚಾತ್ತಾಪಪಟ್ಟು ಅಲ್ಲಾಹನೆಡೆಗೆ ಮರಳಲು ಪ್ರತಿಯೊಬ್ಬ ಸತ್ಯವಿಶ್ವಾಸಿಯೂ ಸನ್ನದ್ಧರಾಗಬೇಕಾಗಿದೆ. ಇಲ್ಲದಿದ್ದರೆ ಯಾರ್‍ಯಾರ ಗೀಬತ್ ಮಾಡಿ ಅವರ ದೋಷಗಳನ್ನು ತಾನೇ ಹೊತ್ತುಕೊಂಡು, ತನ್ನ ಸತ್ಕರ್ಮಗಳು ತಾನು ದೂಷಿಸಿದವನಿಗೆ ವರ್ಗಾಯಿಸಲ್ಪಟ್ಟು, ಪರಲೋಕದಲ್ಲಿ ದಿವಾಳಿಯಾಗಿ ಜ್ವಲಿಸುವ ನರಕಾಗ್ನಿಗೆ ಎಸೆಯಲ್ಪಡುವ ದುರಾವಸ್ಥೆ ಬಂದೊದಗಬಹುದು.

---

ಕಬರ್ ಸ್ಥಾನದಲ್ಲಿ
ಸಮಾಧಿಯನ್ನು (ಕಬರ್) ಸಿಮೆಂಟ್
ಹಾಕಿ ಕಲ್ಲಿನಿಂದ ಎತ್ತರಿಸಿ
ಕಟ್ಟುವುದನ್ನು ನಿಷೇಧಿಸಲಾಗಿದೆ
ಆಡಳಿತ ಸಮಿತಿ
ಉಳ್ಳಾಲ ಕೇಂದ್ರ ಜುಮಾ ಮಸೀದಿ ಮತ್ತು ಸಯ್ಯಿದ್ ಮದನಿ ದರ್ಗಾ ಸಮಿತಿ

ಅಲ್ ಹಮ್ದುಲಿಲ್ಲಾಹ್, ಖಬರ್‌ಗಳನ್ನು ಸಿಮೆಂಟ್ ಹಾಕಿ ಎತ್ತರಿಸಿ ಕಟ್ಟಬಾರದೆಂದು ಉಳ್ಳಾಲ ದರ್ಗಾ ಸಮಿತಿಯು ಹಾಕಿದ ಫಲಕ ವಾಗಿದೆ ಇದು. ಈ ಆದೇಶವನ್ನು ನಮ್ಮ ನೇತಾರರಾದ ಪ್ರವಾದಿ ಮುಹಮ್ಮದ್(ಸ)ರವರು 14 ಶತಮಾನಕ್ಕೆ ಮೊದಲೇ ಸಮುದಾಯಕ್ಕೆ ಆದೇಶಿಸಿದ್ದಾರೆ. ಆದರೆ ಅವರ ಮಾತನ್ನು ಧಿಕ್ಕರಿಸಿ ಖಬರ್‌ಗಳನ್ನು ಎತ್ತರಿಸಿ ಕಟ್ಟಿ, ಜನರ ಈಮಾನನ್ನೂ, ಹಣವನ್ನೂ ಕೊಳ್ಳೆ ಹೊಡೆಯುವ ಪುರೋಹಿತರು ತಮ್ಮ ಹೊಟ್ಟೆಗೆ ಅಗ್ನಿಯನ್ನು ತುಂಬಿಸುತ್ತಿದ್ದಾರೆ.



## ಪ್ರವಾದಿ(ಸ)ಯವರ ಆದೇಶ

ಜಾಬಿರ್(ರ)ರಿಂದ "ಗೋರಿಯ ಮೇಲೆ ಕೂರುವುದು, ಅದಕ್ಕೆ ಸುಣ್ಣ ಬಳಿಯುವುದು, ಅದರ ಮೇಲೆ ಕಟ್ಟಡ ನಿರ್ಮಿಸುವುದು ಮತ್ತು ಅದಕ್ಕೆ ಬೇರೆ ಮಣ್ಣನ್ನು ಉಪಯೋಗಿಸಿ ಎತ್ತರಿಸಿ ಕಟ್ಟುವುದನ್ನು ಪ್ರವಾದಿ(ಸ)ರವರು ವಿರೋಧಿಸಿದ್ದಾರೆ" (ಮುಸ್ಲಿಮ್ ಹ.ನಂ. 970).

ಸುಮಾಮಾರಿಂದ: "ಪ್ರವಾದಿ(ಸ)ರವರ ಕಾಲದಲ್ಲಿ ಒಬ್ಬ ವ್ಯಕ್ತಿ ಮೃತಪಟ್ಟರು. ಆ ವ್ಯಕ್ತಿಯ ದಫನ ಕಾರ್ಯದಲ್ಲಿ ಪ್ರವಾದಿ(ಸ)ರವರು ಹಾಜರಿದ್ದರು. ಅವರು ಹೇಳಿದರು - ನಿಮ್ಮ ಸಹವರ್ತಿಯ ಗೋರಿಯನ್ನು ಹಗುರಗೊಳಿಸಿರಿ, ಅರ್ಥಾತ್ ಅವನ ಗೋರಿಯ ಮೇಲೆ ಮಣ್ಣನ್ನು ಹೆಚ್ಚಿಸದಿರಿ" (ಅಬ್ದುರಝಾಕ್ ಹ.ನಂ. 6492).

# ಪರದೂಷಣೆ ಮತ್ತು ಚಾಡಿ: ನರಕದೆಡೆಗೆ ಹಾದಿ

✍ ಅಬೂನ್ನಿಸಾ, ಮಂಗಳೂರು

## ಅಲ್–ಗೀಬಾದ ಮಾದರಿ

**ಪರದೂಷಣೆ(ಗೀಬತ್) ಐದು ವಿಧ**

1. **ವೈಯಕ್ತಿಕ ಗೀಬತ್:** ಕುರುಡ, ಕುಂಟ, ಕೆಪ್ಪ, ಮೂಗ, ಬೋಳ, ಲಂಬು, ಕರಿಯ ಇತ್ಯಾದಿ ಮನುಷ್ಯನ ದೈಹಿಕ ವೈಕಲ್ಯ ಅಥವಾ ದೇಹ ಪ್ರಕೃತಿಯನ್ನು ಹೀನೈಸುವುದು.
2. **ಮನೆತನ, ಜಾತಿಯ ಕುರಿತಾದ ಗೀಬತ್:** ಮನೆತನ, ವಂಶ, ಜಾತಿ, ಕುಟುಂಬ ಹಾಗೂ ಕಸುಬುಗಳನ್ನು ಎತ್ತಿ ಹೇಳಿ ಪರದೂಷಣೆ ಮಾಡುವುದು. ಕೀಳು ಜಾತಿಯವನು, ರಸ್ತೆ ಗುಡಿಸುವವನು, ಗದ್ದೆ ಉಳುವವನು, ಅನಾಗರಿಕ, ಬುದ್ಧಿ ಹೀನ ಎಂದೆಲ್ಲಾ ಕರೆಯುವುದು ಗೀಬತ್ ಆಗಿದೆ.
3. **ವ್ಯಕ್ತಿಯ ಗುಣ ಲಕ್ಷಣಗಳ ಗೀಬತ್:** ಅಹಂಕಾರಿ, ಧನಲೋಭಿ, ಆಡಂಭರ ಪ್ರದರ್ಶಿಸುವವನು, ಮುಂಗೋಪಿ, ಹೇಡಿ, ದುಷ್ಟ ಇತ್ಯಾದಿಯಾಗಿ ಜನರ ಗುಣ ಲಕ್ಷಣಗಳನ್ನು ಹೀಯಾಳಿಸಿ ಗೀಬತ್ ಮಾಡುವುದು.
4. **ವ್ಯಕ್ತಿಯ ಲೌಕಿಕತೆಗಳ ಕುರಿತಾದ ಗೀಬತ್:** ವಾಚಾಳಿ, ಹೊಟ್ಟೆಬಾಕ, ನಿದ್ರಾರಾಕ್ಷಸ, ಸ್ವಾರ್ಥಿ, ಇತರರನ್ನು ಲೆಕ್ಕಿಸದವನು, ಹೊಲಸು, ಸ್ವತಃ ತನ್ನನ್ನೇ ಸರಿಯಾಗಿ ನೋಡದವನು ಎಂದೆಲ್ಲಾ ಹೇಳಿ ಗೀಬತ್ ಮಾಡುವುದು.
5. **ವ್ಯಕ್ತಿಯ ಧಾರ್ಮಿಕ ಗುಣಗಳ ಗೀಬತ್:** ಕಳ್ಳ, ಸುಳ್ಳ, ಕುಡುಕ, ಸ್ವಚ್ಛತೆಯಲ್ಲಿ ನಿರ್ಲಕ್ಷ್ಯ ತೋರುವವನು, ಪ್ರಾರ್ಥನೆಯಲ್ಲಿ ಕೃತ್ರಿಮಭಾವ ತೋರುವವನು, ಇಸ್ಲಾಮಿನ ಬಗ್ಗೆ ತಿಳುವಳಿಕೆಯಿಲ್ಲದವನು ಎಂದೆಲ್ಲಾ ಹಂಗಿಸಿ ಗೀಬತ್ ಮಾಡುವುದು.

ಆದ್ದರಿಂದ ಮುಸ್ಲಿಮರು ಶೈತಾನನ ಕುರಿತು ಜಾಗರೂಕರಾಗಿರಬೇಕು. ಏಕೆಂದರೆ ಅವನಿಗೆ ಅಲ್ಲಾಹನ ಶಾಪವಿದೆ. ಪರದೂಷಣೆಯ ಗಂಭೀರತೆಯ ಕುರಿತು ನಮ್ಮ ಸಹೋದರನಿಗೆ ನಾವೆಷ್ಟು ಪ್ರಾಮಾಣಿಕವಾಗಿ ಉಪದೇಶಿಸಿದರೂ ನಮ್ಮ ಮಾತನ್ನು ನಂಬದಂತೆ ಶೈತಾನನು ತಡೆಯುತ್ತಾನೆ. ನಿಸ್ವಾರ್ಥಿಗಳಾದ ಉಪದೇಶಕರು ಮುಸ್ಲಿಮ್ ಸಹೋದರರನ್ನು ವೈಯಕ್ತಿಕವಾಗಿ ಸಂಪರ್ಕಿಸಿ ಅವರ ಕೃತ್ಯದ ಕುರಿತು ಮನವರಿಕೆ ಮಾಡಿ ಕೊಡಬೇಕು ಮತ್ತು ಪರದೂಷಣೆಯೆಂಬ ರೋಗದ ಶಮನಕ್ಕಾಗಿ ಅಲ್ಲಾಹನೊಡನೆ ಪ್ರಾರ್ಥಿಸಬೇಕು.

## ಅಲ್‌ಗೀಬಾದ ಕಾರಣಗಳು

**ಅಲ್–ಗೀಬಾ ಅಥವಾ ಪರದೂಷಣೆಗೆ ಏಳು ಕಾರಣಗಳಿವೆ:**

1. **ಒಬ್ಬನ ಕೋಪಕ್ಕೆ ಅವಕಾಶ ಮಾಡಿ ಕೊಡುವುದು:** ಇದು ಇಬ್ಬರ ಮಧ್ಯೆ ಚರ್ಚೆ ಅಥವಾ ತರ್ಕ ನಡೆಯುವ ಮೂಲಕ ಉಂಟಾಗುತ್ತದೆ. ಅವರಲ್ಲೊಬ್ಬನು ಸಭೆಯೊಂದರಲ್ಲಿ ಇನ್ನೊಬ್ಬನ ಪರದೂಷಣೆ ಮಾಡಿ ಅವರನ್ನು ತೃಪ್ತಿಪಡಿಸಲಿಕ್ಕಾಗಿ ತನ್ನನ್ನು ಸಮರ್ಥಿಸುತ್ತಾನೆ.
2. **ಒಬ್ಬನ ಸಹವಾಸವನ್ನು ಸ್ವೀಕರಿಸುವುದು ಮತ್ತು ಅವನೊಂದಿಗೆ ಹೊಂದಿಕೊಳ್ಳಲು ಬಯಸುವುದು:** ಒಬ್ಬನು ಇನ್ನೊಬ್ಬನ ಗೆಳೆಯನ ಕುರಿತು ಅವನ ಹಿಂದಿನಿಂದ ಕೆಟ್ಟ ಮಾತುಗಳನ್ನಾಡುವುದನ್ನು ಮತ್ತು ಮುಸ್ಲಿಮ್ ಸಹೋದರನೊಬ್ಬನ ಪರದೂಷಣೆ ಮಾಡುವುದನ್ನು ಆಲಿಸಿದರೆ ಮುಸ್ಲಿಮನ ಪರದೂಷಣೆ ಮಾಡಬಾರದೆಂದು ವಿರೋಧಿಸುವುದರ ಬದಲು ಮತ್ತು ಎಚ್ಚರಿಕೆ ಕೊಡುವುದರ ಬದಲು ಮುಸ್ಲಿಮನ ಪರದೂಷಣೆ ಮಾಡಲು ಅವರು ಸಹಾಯ ಮಾಡುತ್ತಾರೆ. ಒಂದು ವೇಳೆ ಅವರು ಅಲ್ಲಾಹನ ವಚನವನ್ನು ಆಲಿಸುತ್ತಿದ್ದರೆ ಮತ್ತು ಅನುಸರಿಸುತ್ತಿದ್ದರೆ.
   "ಆ ದಿನ ಮಿತ್ರರು - ಅವರಲ್ಲಿ ಕೆಲವರು ಕೆಲವರಿಗೆ ಶತ್ರುಗಳಾಗಿರುವರು. ದೇವಭಯವುಳ್ಳವರ ಹೊರತು" (ಕುರ್‌ಆನ್ 43:67).
3. **ತನ್ನನ್ನು ಉನ್ನತಿಗೇರಿಸಲಿಕ್ಕಾಗಿ ಇನ್ನೊಬ್ಬನನ್ನು ಕೀಳಾಗಿಸುವುದು:** ಅದೇ ರೀತಿ ಒಬ್ಬನನ್ನು ಹೊಗಳುವಾಗ ಇನ್ನೊಬ್ಬನಿಗೆ ಮತ್ಸರ ಉಂಟಾಗುತ್ತದೆ. ಆಗ ಅವನನ್ನು ಕೀಳಾಗಿಸಲು ದಾರಿ ಹುಡುಕುತ್ತಾನೆ. ಒಬ್ಬನ ವಿದ್ಯೆ, ಘನತೆ ಮತ್ತು ಒಳ್ಳೆಯ ಗುಣಗಳನ್ನು ಅವನೆದುರು ಪ್ರಶಂಸಿಸಿದರೆ ಅವನು ಹೇಳುತ್ತಾನೆ: ಹೌದು, ಅವನು ಹಾಗೆಯೇ, ಆದರೆ ಅವನಲ್ಲಿ ಇಂತಿಂತಹ ಕೆಟ್ಟ ಗುಣಗಳಿವೆ. ಈ ರೀತಿ ಹೇಳಲು ಶೈತಾನನು ಅವನನ್ನು ಪ್ರೇರೇಪಿಸುತ್ತಾನೆ. ಯಾರಲ್ಲಾದರೂ ಕೆಟ್ಟ ಗುಣಗಳೇನಾದರೂ ಇದ್ದರೆ ಅವನಿಗೆ ವೈಯಕ್ತಿಕವಾಗಿ ಉಪದೇಶಿಸಬೇಕು. ಜನರೆದುರು ಹೇಳಿ ನಿಂದಿಸಬಾರದು.



4. **ಕೇವಲ ಮತ್ಸರ:** ಒಬ್ಬನು ಇನ್ನೊಬ್ಬನನ್ನು ಹೊಗಳುವುದನ್ನು ಕೇಳಿದಾಗ ಕೆಲವರಿಗೆ ಮತ್ಸರವಾಗುವುದಿದೆ. ಇತರರ ಬಗ್ಗೆ ನಾವು ಮತ್ಸರ ಪಡುವಾಗ ಶೈತಾನನು ನಮ್ಮನ್ನು ದಾರಿ ತಪ್ಪಿಸುತ್ತಾನೆ. ಇದರಿಂದಾಗಿ ಅಲ್ಲಾಹನ ಕಡೆಯಿಂದ ತಿರಸ್ಕರಿಸಲ್ಪಡುವವನಾಗುವ ಸಾಧ್ಯತೆಯಿದೆ. ಯಾರನ್ನಾದರೂ ತುಚ್ಛರನ್ನಾಗಿ ಮಾಡುವ ಒಂದೇ ಮಾರ್ಗವೆಂದರೆ ಅವರ ಹಿಂದಿನಿಂದ ಕೆಟ್ಟದಾಗಿ ಮಾತನಾಡುವುದು. ಮುಸ್ಲಿಮರು ಕುರ್‌ಆನ್ ಓದುವಾಗ ಖಂಡಿತ ಜಾಗ್ರತೆ ವಹಿಸಬೇಕು. ಏಕೆಂದರೆ ಅಲ್ಲಾಹು ತಾನಿಚ್ಛಿಸಿದವರಿಗೆ ಮಾತ್ರವೇ ಅದರ ಪ್ರತಿಫಲವನ್ನು ಕೊಡುತ್ತಾನೆ. ಅಲ್ಲಾಹನ ತೀರ್ಮಾನವನ್ನು ಬದಲಾಯಿಸಲು ಯಾರಿಗೂ ಸಾಧ್ಯವಾಗದು.
5. **ಹಾಸ್ಯ ಮತ್ತು ವಿನೋದ:** ಒಬ್ಬನು ಇತರರನ್ನು ನಗಿಸಲಿಕ್ಕಾಗಿ ತನ್ನ ಮುಸ್ಲಿಮ್ ಸಹೋದರನನ್ನು ತಿರಸ್ಕಾರ ಭಾವನೆಯಿಂದ ಪರದೂಷಣೆ ಮಾಡುವುದು. ತಾನು ಒಂದು ಗಂಭೀರ ಪಾಪ ಮಾಡುತ್ತಿದ್ದೇನೆಂದು ಈ ಪರದೂಷಕನಿಗೆ ಗೊತ್ತಾಗುವುದಿಲ್ಲ. ಪ್ರವಾದಿ(ಸ)ರು ಹೇಳಿದ್ದಾರೆ: ಒಬ್ಬ ಮುಸ್ಲಿಮನು ತನ್ನ ಮುಸ್ಲಿಮ್ ಸಹೋದರನನ್ನು ಕೀಳಾಗಿಸುವುದು ಒಂದು ಗಂಭೀರ ಅಪರಾಧವಾಗಿದೆ" (ವರದಿ: ಅಬೂಹುರ್ರೈರ, ಸಹೀಹ್ ಮುಸ್ಲಿಮ್, ಹದೀಸ್ ನಂ. 6219).
6. **ಕರುಣೆಯಿದೆಯೆಂದು ತೋರಿಸುವ ನಟನೆ:** ಆಯ್ಯೋ ಪಾಪ, ಅವನನ್ನು ನೋಡುವಾಗ ನನಗೆ ಕನಿಕರವಾಗುತ್ತದೆ ಎಂದು ಕರುಣೆ ತೋರಿಸುವವರಂತೆ ನಟಿಸುವುದು. ಅವನು ಫಜ್ರ್ ನಮಾಝನ್ನು ಹಗುರವಾಗಿ ತೆಗೆಯುತ್ತಾನೆ. ಅವನು ಗಡ್ಡ ಬೋಳಿಸಿದ್ದಾನೆ. ಅವನು ಇಂತಿಂತಹ ಅಪರಾಧವೆಸಗಿದ್ದಾನೆ ಎಂದೆಲ್ಲಾ ಜನರೆಡೆಯಲ್ಲಿ ಹೇಳಿ ನಿಂದಿಸುವುದು. ಪರದೂಷಣೆ ಮಾಡುವವನಿಗೆ ತನ್ನ ಮುಸ್ಲಿಮ್ ಸಹೋದರನ ಮೇಲೆ ನಿಜವಾಗಿಯೂ ಕರುಣೆಯಿದ್ದರೆ ಅವನ ಬಗ್ಗೆ ಪ್ರಾಮಾಣಿಕ ಕನಿಕರವಿರಬೇಕು. ಅವನ ದೌರ್ಬಲ್ಯವನ್ನು ದೂರೀಕರಿಸ ’ಲಿಕ್ಕಾಗಿ ಅಲ್ಲಾಹನಲ್ಲಿ ಪ್ರಾರ್ಥಿಸಬೇಕು ಮತ್ತು ರಹಸ್ಯವಾಗಿ ಅವನಲ್ಲೇ ಉಪದೇಶಿಸಬೇಕು. ಅವನ ದುರ್ನಡತೆಗಳನ್ನು ಜನರ ಮಧ್ಯೆ ಪ್ರಚಾರ ಮಾಡಬಾರದು.
7. **ಅಲ್ಲಾಹನಿಗೋಸ್ಕರ ಕೋಪಿಸುವುದು:** ಕೆಲವರು ಬೇರೆ ಕೆಲವರ ಬಗ್ಗೆ ಕೋಪದಿಂದ ಹೇಳುವುದನ್ನು ನೀವು ನೋಡಿರಬಹುದು. ಇಂತಿಂತಹವನು ಅಲ್ಲಾಹನ ಮೇರೆಗಳನ್ನು ಮೀರಿದ್ದಾನೆ, ಅಲ್ಲಾಹನ ಆಜ್ಞೆಯನ್ನು ಉಲ್ಲಂಘಿಸಿದ್ದಾನೆ ಎಂದು. ಅಂತಹವರು ದುಷ್ಟರಾಗಿರಬಹುದು ಅಥವಾ ಅರಿವಿಲ್ಲದವರಾಗಿರಬಹುದು. ಈ ದೂಷಿಸುವವರು ಪ್ರಾಮಾಣಿಕರಾಗಿದ್ದರೆ ಕೋಪಿಸುವುದಲ್ಲ, ಅಂತಹವರನ್ನು ಕಂಡು ಒಳಿತನ್ನು ಆದೇಶಿಸಬೇಕು. ಕೆಡುಕನ್ನು ವರ್ಜಿಸುವಂತೆ ಉಪದೇಶಿಸಬೇಕು. (ಮುಂದುವರಿಯುವುದು)

# ಧರ್ಮನಿಷ್ಠ ಖಲೀಫರು

ಅಹ್ಮದ್ ಅನ್ಸಾರ್,
ಮಂಗಳೂರು

(ಕಳೆದ ಸಂಚಿಕೆಯಿಂದ)

ಪ್ರವಾದಿ(ಸ)ರಿಗೆ ಸ್ವಲ್ಪ ಮಟ್ಟಿಗೆ ರೋಗ ಶಮನಗೊಂಡು ನೆಮ್ಮದಿಯುಂಟಾದಾಗ ಅಲಿ(ರ) ಮತ್ತು ಅಬ್ಬಾಸ್(ರ)ರವರ ಸಹಾಯದಿಂದ ಝೊಹರ್ ನಮಾಝಿಗಾಗಿ ಮಸೀದಿಗೆ ಬಂದರು. ಅಲ್ಲಿ ಅಬೂಬಕರ್(ರ)ರವರು ನಮಾಝ್ ಮಾಡುತ್ತಿದ್ದುದನ್ನು ಕಂಡ ಪ್ರವಾದಿ(ಸ)ರಿಗೆ ಅತೀವ ಸಂತಸವಾಯಿತು. ಪ್ರವಾದಿ(ಸ)ರು ಬಂದದ್ದನ್ನು ಕಂಡ ಅಬೂಬಕರ್(ರ)ರವರು ಹಿಂದಕ್ಕೆ ಸರಿದರು. ಆದರೆ ಪ್ರವಾದಿ(ಸ)ರು ಅವರನ್ನು ಅಲ್ಲೇ ನಿಲ್ಲಿಸಿ ತಾನು ಅವರ ಪಕ್ಕದಲ್ಲಿ ಕುಳಿತರು. ನಮಾಝಿನ ಬಳಿಕ ಪ್ರವಾದಿ(ಸ)ರು ನೀಡಿದ ತನ್ನ ಅಂತಿಮ ಪ್ರವಚನದಲ್ಲಿ "ಒಬ್ಬ ದಾಸನಿಗೆ ಇಹಲೋಕದ ಸುಖಗಳ ಪೈಕಿ ಅವನಿಚ್ಛಿಸಿದ್ದನ್ನು ಅಥವಾ ಅಲ್ಲಾಹನ ಬಳಿಯಿರುವುದನ್ನು ಆಯ್ಕೆ ಮಾಡಲು ಅನುಮತಿ ನೀಡಲಾಗಿದೆ. ಅವನು ಅಲ್ಲಾಹನ ಬಳಿಯಿರುವುದನ್ನು ಆಯ್ಕೆ ಮಾಡಿರುವನು" ಎಂದು ಹೇಳಿದರು. ಇದನ್ನು ಕೇಳಿದ ಅಬೂಬಕರ್(ರ)ರವರ ಕಣ್ಣುಗಳಿಂದ ಹರಿದ ಅಶ್ರುಧಾರೆಗಳು ಅವರ ಗಡ್ಡವನ್ನು ತೋಯ್ದುವು. ಪ್ರವಾದಿ(ಸ)ರ ಅಗಲುವಿಕೆಯ ಅನಿವಾರ್ಯತೆ ಅಬೂಬಕರ್(ರ)ರಿಗೆ ಅರ್ಥವಾಯಿತು. ಆದರೆ ಹೆಚ್ಚಿನವರಿಗೆ ಅರ್ಥವಾಗಲಿಲ್ಲ. ಅಬೂಬಕರ್(ರ) ಅಳುವುದನ್ನು ನೋಡಿ ಜನರು ಆಶ್ಚರ್ಯಗೊಂಡರು.

ಪ್ರವಾದಿ(ಸ)ರ ಬದುಕಿನ ಕೊನೆಯ ದಿನ ಬೆಳಗ್ಗಿನ ಜಾವ ಅವರ ಆರೋಗ್ಯದಲ್ಲಿ ಸ್ವಲ್ಪ ಸುಧಾರಣೆಯುಂಟಾಯಿತು. ಅವರ ಕೊಠಡಿಯು ಮಸೀದಿಗೆ ತಾಗಿಕೊಂಡಿತ್ತು. ಪರದೆಯನ್ನು ಸರಿಸಿ ಅಬೂಬಕರ್(ರ)ರವರ ನೇತೃತ್ವದಲ್ಲಿ ಜನರು ನಮಾಝ್ ಮಾಡುತ್ತಿದ್ದುದನ್ನು ಕಂಡು ಕಳೆಗುಂದಿದ್ದ ಅವರ ಮುಖದಲ್ಲಿ ಮಂದಹಾಸ ಬೀರಿತು. ಪ್ರವಾದಿ(ಸ)ರ ಚೇತರಿಕೆಯನ್ನು ಕಂಡ ಜನರು ಸಂತಸದಿಂದ ಮೈಮರೆತರು. ಆದರೆ ಆ ಸಂತೋಷ ಹೆಚ್ಚು ಹೊತ್ತು ಉಳಿಯಲಿಲ್ಲ. ಪ್ರವಾದಿ(ಸ)ರು ನಮಾಝ್‌ಗೆ ನೇತೃತ್ವ ನೀಡಲು ಅಬೂಬಕರ್(ರ)ರೊಡನೆ ಹೇಳಿದರು ಮತ್ತು ಪರದೆ ಬಿದ್ದು ಹೋಯಿತು.

**ಪ್ರವಾದಿ(ಸ)ರ ಮರಣದ ಸುದ್ದಿ:** ಪ್ರವಾದಿ(ಸ)ರ ಆರೋಗ್ಯ ಸುಧಾರಿಸಿದ್ದನ್ನು ಕಂಡು ಅಬೂಬಕರ್(ರ)ರವರು ಮದೀನಾದಿಂದ ಸ್ವಲ್ಪ ದೂರವಿರುವ ತನ್ನ ಪತ್ನಿಯ ಮನೆಗೆ ಹೋಗಿದ್ದರು. ಪ್ರವಾದಿ(ಸ)ರ ಮರಣದ ಸುದ್ದಿಯನ್ನು ಕೇಳಿ ತಕ್ಷಣ ಮದೀನಕ್ಕೆ ಹಿಂತಿರುಗಿದರು. ಯಾರೊಂದಿಗೂ ಮಾತನಾಡದೆ ನೇರವಾಗಿ ಆಯಿಶಾ(ರ)ರ ಕೊಠಡಿಗೆ ತೆರಳಿ ಪ್ರವಾದಿ(ಸ)ರ ಪವಿತ್ರ ದೇಹ ಮುಚ್ಚಿದ್ದ ಬಟ್ಟೆಯನ್ನು ಸರಿಸಿ ಹಣೆಯನ್ನು ಚುಂಬಿಸಿದರು. ದುಃಖದ ಕಟ್ಟೆಯೊಡೆದು ಅಳುತ್ತಾ ತಮಗಾಗಿ ನಾನು ನನ್ನ ಮಾತಾಪಿತರನ್ನು ಸಮರ್ಪಿಸುವೆನು. ಅಲ್ಲಾಹು ತಮಗೆ ಎರಡು ಬಾರಿ ಮರಣ ನೀಡುವುದಿಲ್ಲ. ತಮಗೆ ವಿಧಿಸಿದ್ದ ಒಂದು ಮರಣವು ಇದೀಗ ಆಗಿ ಹೋಯಿತು ಎಂದು ಹೇಳಿ ಮುಖಕ್ಕೆ ಬಟ್ಟೆಯನ್ನು ಮುಚ್ಚಿ ಮಸೀದಿಯ ಕಡೆಗೆ ನಡೆದರು.

ಮಸೀದಿಯಲ್ಲಿ ಜನರ ಒಂದು ದೊಡ್ಡ ಗುಂಪು ಅಳುತ್ತಿತ್ತು. ಧೀರನಾದ ಉಮರ್(ರ) ಖಡ್ಗ ಝಳಪಿಸುತ್ತಾ, ಯಾರೋ ಕಪಟರು ಅಲ್ಲಾಹನ ಸಂದೇಶವಾಹಕರು ಮರಣ ಹೊಂದಿದ್ದಾರೆಂದು ಹೇಳುತ್ತಾರೆ. ಅವರು ಮರಣ ಹೊಂದಿಲ್ಲ, ಪ್ರವಾದಿ(ಸ)ರು ಮರಣ ಹೊಂದಿದ್ದಾರೆಂದು ಯಾರಾದರೂ ಹೇಳಿದರೆ ಅವರ ಶಿರಚ್ಛೇಧ ಮಾಡುವೆನು ಎಂದು ಘರ್ಜಿಸುತ್ತಿದ್ದರು. ಅಬೂಬಕರ್(ರ)ರವರು ಅವರನ್ನು ಸಮಾಧಾನಿಸಿದರು. ಆದರೆ ಉಮರ್(ರ) ಕಿವಿಗೊಡಲಿಲ್ಲ. ಪರಿಸ್ಥಿತಿ ಬಿಗಡಾಯಿಸಿತ್ತು. ಅಬೂಬಕರ್(ರ) ಮಸೀದಿಯ ಒಂದು ಮೂಲೆಯಲ್ಲಿ ನಿಂತು ಜನರನ್ನುದ್ದೇಶಿಸಿ ಹೀಗೆ ಘೋಷಿಸಿದರು. ನಿಮ್ಮಲ್ಲಿ ಯಾರಾದರೂ ಮುಹಮ್ಮದ್(ಸ)ರನ್ನು ಆರಾಧಿಸುತ್ತಿದ್ದೀರೆಂದಾದರೆ ಇದೋ ಅವರು ಮರಣ ಹೊಂದಿದ್ದಾರೆ. ಯಾರಾದರೂ ಅಲ್ಲಾಹನನ್ನು ಆರಾಧಿಸುತ್ತಿದ್ದೀರೆಂದಾದರೆ ಅವನು ಈಗಲೂ ಜೀವಂತವಾಗಿದ್ದಾನೆ. ಬಳಿಕ ಅವರು ಈ ಕುರ್‌ಆನ್ ಸೂಕ್ತವನ್ನು ಓದಿ ಕೇಳಿಸಿದರು: "ಮುಹಮ್ಮದ್ ಅಲ್ಲಾಹನ ಓರ್ವ ಸಂದೇಶವಾಹಕರು ಮಾತ್ರವೇ ಆಗಿದ್ದಾರೆ. ಅವರಿಗಿಂತ ಮುಂಚೆಯೂ ಸಂದೇಶವಾಹಕರು ಗತಿಸಿ ಹೋಗಿದ್ದಾರೆ. ಅವರು ಮರಣ ಹೊಂದಿದರೆ ಅಥವಾ ವಧಿಸಲ್ಪಟ್ಟರೆ ನೀವು ಹಿಂತಿರುಗಿ ಹೋಗುವುದೇ? ಯಾರಾದರೂ ಹಿಂತಿರುಗಿ ಹೋಗುವುದಾದರೆ ಅದು ಅಲ್ಲಾಹನಿಗೇನೂ ಹಾನಿಯುಂಟು ಮಾಡುವುದಿಲ್ಲ. ಕೃತಜ್ಞತೆ ತೋರಿಸುವವರಿಗೆ ಅಲ್ಲಾಹು ಮಹತ್ತರ ಪ್ರತಿಫಲ ನೀಡುವನು" (3:144) ಅಬೂಬಕರ್(ರ)ರವರ ಮಾತುಗಳು ಜನರ ಹೃದಯಕ್ಕೆ ಚುಚ್ಚಿದವು. ತಕ್ಷಣ ಉಮರ್(ರ)ರವರು ಶಾಂತರಾದರು. ಇಬ್‌ನು ಅಬ್ಬಾಸ್(ರ) ಹೇಳುತ್ತಾರೆ: ಅಬೂಬಕರ್ ಈ ಸೂಕ್ತವನ್ನು ಪಾರಾಯಣ ಮಾಡುವತನಕ ಇಂತಹ ಒಂದು ಸೂಕ್ತವನ್ನು ಅಲ್ಲಾಹು ಅವತೀರ್ಣಗೊಳಿಸಿದ್ದಾಗಿ ಜನರು ತಿಳಿದಿರದಂತಿತ್ತು.

### ಪ್ರಥಮ ಖಲೀಫರಾಗಿ ಅಬೂಬಕರ್(ರ) ಆಯ್ಕೆ:

ಪ್ರವಾದಿ(ಸ)ರು ತನ್ನ ಉತ್ತರಾಧಿಕಾರಿಯಾಗಿ ಯಾರನ್ನೂ ನೇಮಕ ಮಾಡಲಿಲ್ಲ.




ಮದೀನಾದಲ್ಲಿ ಮುಹಾಜಿರ್‌ಗಳು (ಮಕ್ಕಾದಿಂದ ಮದೀನಾಕ್ಕೆ ಹಿಜ್ರಾ ಹೋದವರು) ಮತ್ತು ಅನ್ಸಾರ್‌ಗಳು(ಮುಹಾಜಿರ್‌ಗಳಿಗೆ ಸಹಾಯ ಮಾಡಿದವರು) ಎಂಬ ಎರಡು ಪಂಗಡಗಳಿದ್ದವು. ಮುಂದಿನ ಖಲೀಫ ಯಾರಾಗಬೇಕೆಂದು ಚರ್ಚಿಸಲಿಕ್ಕಾಗಿ ಅನ್ಸಾರ್‌ಗಳು ಮದೀನಾದ "ಸಖೀಫ-ಎ-ಬನೀ ಸಅದ" ಎಂಬ ಸಭಾ ಭವನದಲ್ಲಿ ಒಟ್ಟುಗೂಡಿದ್ದರು. ಮಸೀದಿಯಲ್ಲಿದ್ದ ಅಬೂಬಕರ್(ರ) ಮತ್ತು ಉಮರ್(ರ)ರವರಿಗೆ ವಿಷಯ ತಿಳಿದು ಅವರಿಬ್ಬರು ಅಬೂಉಬೈದ ಬಿನ್ ಅಲ್ ಜರ್ರಾಹ್‌ರೊಂದಿಗೆ ಅನ್ಸಾರ್‌ಗಳು ಸಭೆ ಸೇರಿದ್ದ ಸಭಾ ಭವನಕ್ಕೆ ತೆರಳಿದರು. ಆ ಸಂದರ್ಭದಲ್ಲಿ ಅಲಿ ಮತ್ತು ಝುಬೈರ್ ಅಲ್ಲಿಲ್ಲದ್ದರಿಂದ ಆ ಸಭೆಗೆ ಹಾಜರಾಗಲಿಲ್ಲ.

ಖಲೀಫರಾಗಿ ಯಾರನ್ನು ಮಾಡುವುದೆಂದು ಅನ್ಸಾರ್‌ಗಳು ಚರ್ಚಿಸುತ್ತಿದ್ದರು. ಅನ್ಸಾರ್‌ಗಳ ಪೈಕಿ ಒಬ್ಬರನ್ನು ಆಯ್ಕೆ ಮಾಡಬೇಕೆಂಬುದು ಅವರ ಇಚ್ಛೆಯಾಗಿತ್ತು. ಇಸ್ಲಾಮಿಗಾಗಿ ಬಹಳಷ್ಟು ಕಷ್ಟಗಳನ್ನು ಸಹಿಸಿ ತ್ಯಾಗ ಮಾಡಿದ ಅನ್ಸಾರ್‌ಗಳೇ ಖಲೀಫ ಸ್ಥಾನಕ್ಕೆ ಅರ್ಹರೆಂದು ಅಬೂಬಕರ್(ರ)ರವರು ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಆ ಅಭಿಪ್ರಾಯವನ್ನು ಅರಬರು ಒಪ್ಪಲಿಲ್ಲ. ಕುರೈಶಿಗಳಿಂದಾಗ ಬೇಕೆಂದು ಅವರು ವಾದಿಸಿದರು. ಅಷ್ಟರಲ್ಲಿ ಖಬ್ಬಾಬ್ ಬಿನ್ ಮುಂದರ್ ಎಂಬ ಅನ್ಸಾರಿ ಸಹಾಬಿ ಎದ್ದು ನಿಂತು "ಚರ್ಚೆ ಬೇಡ, ಅನ್ಸಾರ್ ಗಳ ಪೈಕಿ ಒಬ್ಬರು, ಕುರೈಶಿಗಳ ಪೈಕಿ ಒಬ್ಬರು, ಹೀಗೆ ಇಬ್ಬರು ಖಲೀಫರನ್ನು ನಾವು ಆಯ್ಕೆ ಮಾಡೋಣ" ಎಂದರು. ಕೂಡಲೇ ಉಮರ್(ರ) ಎದ್ದು ನಿಂತು "ಅದು ಸಾಧ್ಯವಿಲ್ಲ, ಹಾಗೆ ಮಾಡಿದರೆ ಗೊಂದಲ ಉಂಟಾಗುತ್ತದೆ" ಎಂದರು. ಆದರೆ ಉಮರ್(ರ)ರವರ ಮಾತನ್ನು ಮುಂದಿರ್ ಒಪ್ಪಲಿಲ್ಲ. ಇಬ್ಬರೊಳಗೆ ತೀವ್ರವಾಗ್ವಾದ ನಡೆಯಿತು. ಅಬೂಉಬೈದ(ರ) ಅವರಿಬ್ಬರನ್ನು ಸಮಾಧಾನ ಪಡಿಸಿದರು. ಆಗ ಬಶೀರ್ ಬಿನ್ ಸುಲ್‌ಮಾನ್ ಎಂಬ ಇನ್ನೊಬ್ಬ ಅನ್ಸಾರಿ ಸಹಾಬಿ ಎದ್ದು ನಿಂತು "ಪ್ರವಾದಿ(ಸ)ರು ಕುರೈಶಿ ಗೋತ್ರದವರು, ಕುರೈಶರಿಗೆ ಇತರರಿಗಿಂತ ಹೆಚ್ಚು ಆದ್ಯತೆಯಿದೆ. ಆದ್ದರಿಂದ ಕುರೈಶರಿಂದಲೇ ಖಲೀಫರ ಆಯ್ಕೆಯಾಗಬೇಕು. ಎಲ್ಲರೂ ಇದನ್ನು ಒಪ್ಪಬೇಕು. ಮದೀನಾದವರಾದ ನಾವು ಅನ್ಸಾರ್‌ಗಳಾಗಿಯೇ ಇರುತ್ತೇವೆ. ಅಲ್ಲಾಹು ಮತ್ತು ಅವನ ಸಂದೇಶವಾಹಕ(ಸ)ರ ಸಹಾಯಕರಾಗಿರುವುದನ್ನೇ ನಾವು ಇಷ್ಟ ಪಡುತ್ತೇವೆ. ಮುಹಾಜಿರ್‌ಗಳು ಖಲೀಫರಾಗುವುದರಲ್ಲಿ ಅನ್ಸಾರ್‌ಗಳಾದ ನಮಗೆ ಯಾವುದೇ ವಿರೋಧವಿಲ್ಲ" ಎಂದು ಹೇಳಿದರು. ಅವರ ಅಭಿಪ್ರಾಯವನ್ನು ಅನುಮೋದಿಸಿದ ಮತ್ತೊಬ್ಬ ಅನ್ಸಾರಿ ಸಹಾಬಿ ಝೈದ್ ಬಿನ್ ಸಾಬಿತ್(ರ)ರವರು "ಕುರೈಶರಿಂದಲೇ ಖಲೀಫರ ನೇಮಕವಾಗಲಿ, ನಾವು ಮದೀನಾದವರು, ಪ್ರವಾದಿ(ಸ)ರಿಗೆ ಸಹಾಯ ಮಾಡುವವರು. ನಾವು ಸಹಾಯ ಮಾಡಿದವರೇ ಖಲೀಫರಾಗಬೇಕೆಂದು ನಾವು ಬಯಸುತ್ತೇವೆ" ಎಂದು ಹೇಳಿದರು. ಈ ಅಭಿ ಪ್ರಾಯಕ್ಕೆ ಅನ್ಸಾರ್‌ಗಳೆಲ್ಲರೂ ಬೆಂಬಲ ಸೂಚಿಸಿದರು. ಕುರೈಶರನ್ನೇ ಖಲೀಫರಾಗಿ ಆಯ್ಕೆ ಮಾಡುವುದೆಂದು ಸಭೆಯು ಸರ್ವಾನುಮತದಿಂದ ತೀರ್ಮಾನಿಸಿತು.

ಅದನ್ನೆಲ್ಲಾ ನೋಡುತ್ತಾ ಕುಳಿತಿದ್ದ ಅಬೂಬಕರ್(ರ) ಎದ್ದು ನಿಂತು, ನಾನು ಖಲೀಫ ಸ್ಥಾನಕ್ಕೆ ಉಮರ್ ಮತ್ತು ಅಬೂ ಉಬಾದಾ ಬಿನ್ ಅಲ್ ಜರ್ರಾಹ್ ಎಂಬಿಬ್ಬರ ಹೆಸರನ್ನು ಸೂಚಿಸುತ್ತೇನೆ. ಇಬ್ಬರಲ್ಲೊಬ್ಬರನ್ನು ಆಯ್ಕೆ ಮಾಡಿ"ಎಂದರು. ಆದರೆ ಇಬ್ಬರೂ ನಿರಾಕರಿಸಿದರು. ಉಮರ್(ರ) ಹೇಳಿದರು: "ಉತ್ತಮರಲ್ಲಿ ಉತ್ತಮರು ಅಬೂಬಕರ್. ಏಕೆಂದರೆ "ಗುಹೆಯಲ್ಲಿದ್ದ ಇಬ್ಬರಲ್ಲಿ ಒಬ್ಬರು" ಎಂದು ಅಲ್ಲಾಹು ಕುರ್‌ಆನಿನಲ್ಲಿ (9:40) ಹೇಳಿದ್ದಾನೆ. ಮಾತ್ರವಲ್ಲ, ಎಲ್ಲಾ ಸಂದರ್ಭಗಳಲ್ಲೂ ಪ್ರವಾದಿ(ಸ)ರೊಂದಿಗೇ ಇದ್ದವರು. ಪ್ರವಾದಿ(ಸ)ರ ಅನುಪಸ್ಥಿತಿಯಲ್ಲಿ ನಮಾಝ್‌ಗೆ ನೇತೃತ್ವ ನೀಡಿದವರು. ಹಜ್ಜ್ ತಂಡದ ಮುಖ್ಯಸ್ಥರಾಗಿ ಆಯ್ಕೆಗೊಂಡಿದ್ದರು. ಆದ್ದರಿಂದ ಅಬೂಬಕರ್(ರ)ರವರು ಖಲೀಫರಾಗಲು ಎಲ್ಲಾ ರೀತಿಯಲ್ಲೂ ಅರ್ಹರಾಗಿದ್ದಾರೆ.

(10ನೇ ಪುಟಕ್ಕೆ)

# ಧಾರ್ಮಿಕ ಪ್ರಶ್ನೋತ್ತರಗಳು

## ಪ್ರಾಣಿಗಳಿಗೆ ನಾಮಕರಣ

ಪ್ರ: ಅನ್ಯಮತೀಯರು ನಾಯಿ ಮುಂತಾದ ಸಾಕು ಪ್ರಾಣಿಗಳಿಗೆ ಕೆಲವು ಪ್ರತ್ಯೇಕ ಹೆಸರು ಹಾಕಿ ಕರೆಯುತ್ತಾರೆ. ನಾನೊಂದು ಬೆಕ್ಕು ಸಾಕಿದ್ದೇನೆ. ಅದಕ್ಕೆ ಪ್ರತ್ಯೇಕ ಹೆಸರಿಡಬೇಕೆಂದಿದ್ದೇನೆ. ಇಸ್ಲಾಮ್‌ನಲ್ಲಿ ಇದಕ್ಕೆ ಅವಕಾಶವಿದೆಯೇ?

ಉ: ಪ್ರಾಣಿಗಳಿಗೆ ಅವುಗಳ ಮೂಲ ಹೆಸರಲ್ಲದ ಬೇರೆ ಹೆಸರುಗಳನ್ನಿಡುವುದಕ್ಕೆ ಯಾವುದೇ ವಿರೋಧವಿಲ್ಲ. ಅನಸ್(ರ)ರವರು ಹೇಳುತ್ತಾರೆ: "ಪ್ರವಾದಿ(ಸ)ರವರ ಬಳಿ ಒಂದು ಹೆಣ್ಣು ಒಂಟೆ ಇತ್ತು, ಅದಕ್ಕೆ ಅವರು 'ಅದ್‌ಬಾ' ಎಂಬ ಹೆಸರಿಟ್ಟಿದ್ದರು" (ಸಹೀಹುಲ್ ಬುಖಾರಿ 2873).

ಈ ಹದೀಸ್‌ಗಳನ್ನು ವ್ಯಾಖ್ಯಾನಿಸುತ್ತಾ ಇಮಾಮ್ ಬಗವಿ(ಸ)ರವರು ಹೇಳುತ್ತಾರೆ: "ಪ್ರಾಣಿಗಳಿಗೆ ನಾಮಕರಣ ಮಾಡುವುದು ಸಮ್ಮತಾರ್ಹ ಎಂಬುದಕ್ಕೆ ಈ ಹದೀಸ್‌ಗಳಲ್ಲಿ ಆಧಾರ ವಿದೆ. ಅರಬರು ಪ್ರಾಣಿಗಳಿಗೆ ಮಾತ್ರವಲ್ಲ, ತಮ್ಮ ಯುದ್ಧಾಯುಧಗಳಿಗೂ (ಅವುಗಳ ಮೂಲ ಹೆಸರಿನೊಂದಿಗೆ) ವಿಶೇಷ ಹೆಸರು ಗಳನ್ನಿಡುತ್ತಿದ್ದರು" (ಶರ್ಹುಸ್ಸುನ್ನ 8-222).

ಪ್ರವಾದಿ(ಸ)ರವರ ಒಂದು ಕುದುರೆಯ ಹೆಸರು "ಅಲ್ಲಈಫ್" ಎಂದಾಗಿತ್ತು (ಬುಖಾರಿ 2855). ಪ್ರವಾದಿ(ಸ)ರವರ ಬಳಿ ಇದ್ದ ಕತ್ತೆಯೊಂದರ ಹೆಸರು "ಉಫೈರ್" (2865).

ಪ್ರಮುಖ ಸಹಾಬಿ ಅಬೂ ದರ್ದಾಲ್(ರ) ರವರ ಬಳಿ "ದಮೂನ್" ಎಂಬ ಹೆಸರಿನ ಒಂಟೆ ಇತ್ತು. ಅಬೂಖತಾದ(ರ)ರವರ ಕುದುರೆಯ ಹೆಸರು"ಅಲ್‌ಜರಾದಃ" ಎಂದಾಗಿತ್ತು (ಬುಖಾರಿ 2854). ಇಷ್ಟೆಲ್ಲಾ ಪ್ರಮಾಣಗಳು ಕಣ್ಣೆದುರಿ ಗಿರುವಾಗ ನೀವು ನಿಮ್ಮ ಬೆಕ್ಕಿಗೆ ಉತ್ತಮ ಹೆಸರಿಡುವುದಕ್ಕೆ ಯಾವುದೇ ವಿರೋಧವಿಲ್ಲ.

**-ಶೈಖ್ ಸ್ವಾಲಿಹ್ ಅಲ್ ಮುನಜ್ಜಿದ್**

## ಲ್ಯಾಬ್‌ನಿಂದ ಸಿಗುವ ಹಣದ ವಿಧಿ

ಪ್ರ: ತಮ್ಮ ಲ್ಯಾಬೋರೇಟರಿಗೆ (ಪ್ರಯೋಗಶಾಲೆ) ರೋಗಿಗಳನ್ನು ಕಳುಹಿಸಿಕೊಟ್ಟರೆ ಇಂತಿಷ್ಟು ಹಣ ನೀಡುವುದಾಗಿ ಲ್ಯಾಬ್‌ನ ಯಜಮಾನ ಮತ್ತು ವೈದ್ಯರ ನಡುವೆ ಒಪ್ಪಂದ ನಡೆದಿರುತ್ತದೆ. ಇದರ ಪ್ರಕಾರ ಮೆಡಿಕಲ್ ಲ್ಯಾಬೋರೇಟರಿಯ ಯಜಮಾನ ತಮ್ಮಲ್ಲಿಗೆ ರೋಗಿಗಳನ್ನು ಕಳುಹಿಸಿ ಕೊಡಲಿಕ್ಕಾಗಿ ವೈದ್ಯರುಗಳಿಗೆ ನೀಡುವ ಹಣ ಧರ್ಮಬದ್ಧವೇ?

ಉ: ವೈದ್ಯಕೀಯ ಪರೀಕ್ಷೆಗಾಗಿ ರೋಗಿಗಳನ್ನು ಕಳುಹಿಸಿ ಕೊಡುವ ಕಾರಣಕ್ಕಾಗಿ ಲ್ಯಾಬೋರೇಟರಿಯವರಿಂದ ವೈದ್ಯನು ಪಡೆಯುವ ಹಣ ಇಸ್ಲಾಮ್ ವಿರೋಧಿಸಿದ ಲಂಚದ ಸರದಿಗೆ ಸೇರಿರುತ್ತದೆ. ಅದನ್ನು ಪಡೆಯುವುದು ಧರ್ಮಬದ್ಧವಲ್ಲ. ಫತಾವಾ ಲಜ್ನತುದ್ದಾಯಿಮ (23-566)ದಲ್ಲಿ ಇದನ್ನು ಸ್ಪಷ್ಟ ಪಡಿಸಲಾಗಿದೆ.

## ವರನೇ ಖುತುಬ ಮಾಡಿದರೆ!

ಪ್ರ: ನಿಕಾ ವೇಳೆ ಖುತುಬ ನಿರ್ವಹಿಸುವವರು ಇತರರೇ ಆಗಿರಬೇಕೆಂಬ ನಿಯಮವಿದೆಯೇ? ಸ್ವತಃ ವರನೇ ಖುತುಬ ಮಾಡಿದರೆ ತಪ್ಪಾಗುತ್ತದೆಯೇ?

ಉ: ನಿಕಾ ಖುತುಬಾಕ್ಕೆ ಇಂತಹವರೇ ಆಗಬೇಕೆಂಬ ನಿಯಮವಿಲ್ಲ, ವರನಿಗೆ ಆ ಬಗ್ಗೆ ತಿಳುವಳಿಕೆ ಇದ್ದರೆ ಅವನೇ ಖುತುಬಾ ನಿರ್ವಹಿಸಬಹುದು. ಪ್ರಸಿದ್ಧ ವಿದ್ವಾಂಸ ಇಮಾಮ್ ಇಬ್ನು ಖುದಾಮ(ರ)ರು ಹೇಳುತ್ತಾರೆ: "ಈಜಾಬ್ ಮತ್ತು ಖಬೂಲ್(ಎರಡೂ ಕಡೆ ಯಿಂದ ಏರ್ಪಡುವ ವಿವಾಹ ಸ್ವೀಕೃತಿಯ ಪ್ರಸ್ತಾಪ)ಗೆ ಮುಂಚಿತವಾಗಿ ವರ ಅಥ'ವಾ ಇತರರು ಉಪದೇಶ ನೀಡುವುದು, ಅನಂತರ ವಿವಾಹ ಕಾರ್ಯ ನೆರವೇರಿಸುವುದು ಸುನ್ನತ್ತಾಗಿರುತ್ತದೆ. (ಮುಗ್ನಿ 7:62)

## ನೀನೇ ನನ್ನ ಪ್ರಾಣ ಎಂದರೆ?

ಪ್ರ: ಪತ್ನಿಯು ಪತಿಯೊಂದಿಗೆ "ನೀನೇ ನನ್ನ ಪ್ರಾಣ, ನೀನಲ್ಲದೆ ನಾನು ಬದುಕಿರಲಾರೆ" (ಅಂತ ರೂಹೀ ಲಾ ಅಸ್ತತೀಉಲ್ ಅಯಿಶ ಬಿದೂನಿಕ) ಇತ್ಯಾದಿ ಅಭಿಸಂಬೋಧನೆ ಮಾಡುವುದರ ವಿಧಿಯೇನು?

ಉ: ನೀವು ಹೇಳಿದಂತೆ ಪತ್ನಿಯು ಪತಿಯೊಂದಿಗೆ ಹೇಳುವುದರಲ್ಲಿ ಯಾವುದೇ ವಿರೋಧವಿಲ್ಲ. ಮಾತ್ರವಲ್ಲ, ಇದು ದಂಪತಿಗಳ ನಡುವಿನ ಪ್ರೀತಿಯನ್ನು ಹೆಚ್ಚಿಸಲು ಸಹಕಾರಿ ಕೂಡಾ. ಇಲ್ಲಿ ಆತ್ಮ(ಪ್ರಾಣ) ಎನ್ನುವುದನ್ನು ಯಾರೂ ಅದರ ಯತಾರ್ಥ ಅರ್ಥದಲ್ಲಿ ಉಪಯೋಗಿಸುವುದಿಲ್ಲ. ಬದಲು ಅದು ದಂಪತಿಗಳಲ್ಲಿ ಒಬ್ಬರು ಮತ್ತೊಬ್ಬರನ್ನು ಬಿಟ್ಟಿರಲಾಗದ ಗಾಢವಾದ ಪ್ರೀತಿ ಮತ್ತು ಪತ್ನಿಗೆ ಪತಿಯ ಮೇಲಿರುವ ತೀವ್ರವಾದ ಕಾಳಜಿಯನ್ನು ಧ್ವನಿಸುತ್ತದೆ. ಇಂತಹ ಸಂಭಾಷಣೆ ಅರಬರ ನಡುವೆ ಸಾಮಾನ್ಯ.

ಪತ್ನಿಯು ಪತಿಯೊಂದಿಗೆ ಹಾಗೆ ಹೇಳುವಾಗ ಸ್ಫುರಿಸುವ ಅರ್ಥ ಇಷ್ಟೇ. ಶರೀರಕ್ಕೆ ಆತ್ಮದ ಅಗತ್ಯ ಎಷ್ಟಿದೆಯೋ ಹಾಗೆಯೇ ನನ್ನ ಬಾಳಿಗೆ ನಿಮ್ಮ ಸಾನ್ನಿಧ್ಯ ತೀರಾ ಅಗತ್ಯ. ನೀವಿಲ್ಲದ ಬದುಕು ಎಂದರೆ ಅದು ಒಂಟಿತನ ಮತ್ತು ಏಕಾಂತವನ್ನುಂಟು ಮಾಡುವ ನೀರಸ ಹಾಗೂ ನಿಷ್ಪ್ರಯೋಜಕ ಜೀವನ. ಹೀಗೆ ಸಂಭಾಷಣೆ ಮಾಡುವುದರಲ್ಲಿ ಯಾವುದೇ ಅಸಂಗತವಿಲ್ಲ.

## ಹಜರುಲ್ ಅಸ್ವದ್ ಸ್ವರ್ಗದಿಂದ ಬಂದ ಶಿಲೆಯೇ?

ಪ್ರ: "ಹಜರ್ ಅಲ್ ಅಸ್ವದ್" ಸ್ವರ್ಗದಿಂದ ಬಂದ ಶಿಲೆ ಎಂಬುದಾಗಿ ಅನೇಕ ಜನರು ಹೇಳುತ್ತಾರೆ. ಇದು ನಿಜವೇ?

ಉ: ಇಮಾಮ್ ತುರ್ಮುದ್ಸಿ(ರ) ವರದಿ ಮಾಡಿದ ಒಂದು ಹದೀಸ್‌ನಲ್ಲಿ "ಹಜರುಲ್ ಅಸ್ವದ್ ಸ್ವರ್ಗದಿಂದ ಇಳಿದು ಬಂದಿದೆ" ಎಂಬ ಪ್ರಸ್ತಾಪವಿದೆ. ನಾಸಿರುದ್ದೀನ್ ಅಲ್ಬಾನಿ(ರ) ಈ ಹದೀಸ್ ಸಹೀಹ್ ಎಂದಿದ್ದರೂ ಇದರ ಪರಂಪರೆಯಲ್ಲಿ ತುಸು ದೌರ್ಬಲ್ಯವಿರುವುದಾಗಿ ವಿದ್ವಾಂಸರು ಸ್ಪಷ್ಟ ಪಡಿಸಿದ್ದಾರೆ (ನೋಡಿ, ಫತಾವಲಜ್ನತುದ್ದಾಯಿಮ 11-228).

## ಭೂಮಿಗೆ ಭೂಮಿ ವಿನಿಮಯ

ಪ್ರ: ನನಗೆ ಗ್ರಾಮೀಣ ಪ್ರದೇಶದಲ್ಲಿ ದೊಡ್ಡದೊಂದು ಜಮೀನು(ಭೂಮಿ) ಇದೆ. ಇದನ್ನು ನಗರದ ಸಮೀಪವಿರುವ, ಆದರೆ ಗಾತ್ರದಲ್ಲಿ ಚಿಕ್ಕದಾಗಿರುವ ಜಮೀನಿಗೆ ಬದಲಿಯಾಗಿ ವಿನಿಮಯ ಮಾಡಿಕೊಳ್ಳಬಹುದೇ?

ಉ: ದೊಡ್ಡ ಜಮೀನಿಗೆ ಬದಲಿ ಸಣ್ಣ ಜಮೀನು ವಿನಿಮಯ(Exchange) ಮಾಡಿಕೊಳ್ಳುವುದು ಸಮ್ಮತಾರ್ಹವಾಗಿದೆ.

ಒಂದಕ್ಕೊಂದು (ಅದಲು ಬದಲು) ಕೊಟ್ಟು ತೆಗೆದುಕೊಳ್ಳುವುದರಲ್ಲಿ ಬಡ್ಡಿ ಬರುವ ವ್ಯವಹಾರವೂ ಇದೆ. ಆದರೆ ಭೂಮಿ ಆ ಸಾಲಿಗೆ ಸೇರುವುದಿಲ್ಲ. ಬಡ್ಡಿ ಬರುವ ವಿನಿಮಯ ವ್ಯವಹಾರ ಯಾವುದೆಲ್ಲ ಎಂಬುದನ್ನು ಹದೀಸ್‌ಗಳಲ್ಲಿ ಸ್ಪಷ್ಟ ಪಡಿಸಲಾಗಿದೆ. ಮಹಾತ್ಮರಾದ ಇಬ್ನು ಉಮರ್(ರ)ರವರು ತಮಗೆ ಸೇರಿದ, ಮದೀನದ ಉತ್ತರ ದಿಕ್ಕಿನಲ್ಲಿದ್ದ ಒಂದು ಭೂಮಿ ಯನ್ನು ಉಸ್ಮಾನ್(ರ) ಅವರ ನಗರ ಸಮೀಪವಿರುವ ಭೂಮಿಗೆ ವಿನಿಮಯ ಮಾಡಿಕೊಂಡಿದ್ದರು (ಬುಖಾರಿ 216).

**-ಶೈಖ್ ಸಾಲಿಹ್ ಅಲ್ ಮುನಜ್ಜಿದ್**

## ಫರ್ದ್ ಮತ್ತು ವಾಜಿಬ್

ಪ್ರ: ಫರ್ದ್ ಮತ್ತು ವಾಜಿಬ್ ಇವೆರಡರ ನಡುವೆ ಏನಾದರೂ ವ್ಯತ್ಯಾಸವಿದೆಯೇ? ಅಥವಾ ಅವೆರಡು ಒಂದೇ ಅರ್ಥದ ಸಮಾನ ಪದಗಳೇ?

**-ಝೈನ್ ಬೋಂದೆಲ್**

ಉ: ಫರ್ದ್ ಮತ್ತು ವಾಜಿಬ್ ನಡುವೆ ತಾತ್ವಿಕವಾಗಿ ಯಾವುದೇ ವ್ಯತ್ಯಾಸವಿಲ್ಲ. ಇವೆರಡೂ ಒಂದೇ ಅರ್ಥ ಕೊಡುವ ಸಮಾನ ಪದಗಳು(ಮುತರಾದಿಫ್) ಎಂದು ಬಹುತೇಕ ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ಸ್ವೀಕಾರ ಯೋಗ್ಯ ಅಭಿಪ್ರಾಯವೂ ಇದೇ ಆಗಿದೆ.

ಆದರೆ ಹನಫಿ ಮದಹಬ್‌ನಲ್ಲಿ ಮಾತ್ರ ಫರ್ದ್ ಮತ್ತು ವಾಜಿಬ್‌ನ ನಡುವೆ ಸಣ್ಣ ಅಂತರವಿದೆ. ಅವರ ಪ್ರಕಾರ ವ್ಯಾಖ್ಯಾನ ವಿಧೇಯವಲ್ಲದ ಅತ್ಯಂತ ಸ್ಪಷ್ಟವಾದ ಪುರಾವೆಯಿಂದ ಸ್ಥಿರಪಟ್ಟ ಕಾರ್ಯವನ್ನು "ಫರ್ದ್" ಎಂದು ಕರೆದರೆ ವ್ಯಾಖ್ಯಾನ ವಿಧೇಯವಾದ ಅಥ'ವಾ ಅಷ್ಟೇನೂ ಖಚಿತವಲ್ಲದ ಪುರಾವೆಯ ಮೂಲಕ ಸಾಬೀತಾದ ಕಾರ್ಯವನ್ನು "ವಾಜಿಬ್" ಎನ್ನಲಾಗುತ್ತದೆ

ಉದಾ: ಐದು ಹೊತ್ತಿನ ನಮಾಝ್, ಝಕಾತ್ ಇತ್ಯಾದಿ "ಫರ್ದ್"ನ ಸಾಲಿಗೆ ಸೇರಿದರೆ ವಿತ್ರ್ ನಮಾಝ್, ಉದುಹಿಯ್ಯತ್ (ಬಲಿ ಕರ್ಮ) ಮುಂತಾದವು ವಾಜಿಬ್‌ನ ಸಾಲಿಗೆ ಸೇರುತ್ತದೆ. ಇಂತಹ ವಿಂಗಡಣೆಯ ಕಾರಣದಿಂದಾಗಿ ಹನಫಿಗಳು ಒಂದು ತತ್ವವನ್ನು ರೂಪಿಸಿಕೊಂಡಿದ್ದಾರೆ. ಅದೇನೆಂದರೆ "ಫರ್ದ್"ಅನ್ನು ನಿಷೇಧಿಸುವವನು ಕಾಫಿರ್ ಎನಿಸುವನು. ಆದರೆ ವಾಜಿಬ್ ನಿಷೇಧಿಸಿದಾತ ತಪ್ಪಿತಸ್ಥನಾಗುವನೇ ವಿನಃ ಸತ್ಯನಿಷೇಧಿ ಆಗಲಾರ. ಇವಿಷ್ಟು ಫರ್ದ್ ಮತ್ತು ವಾಜಿಬ್‌ಗೆ ಸಂಬಂಧಿಸಿದ ಹನಫೀ ವೀಕ್ಷಣೆಯಾಗಿದೆ. (ಸಲಫಿಗಳಾದ ನಮಗೆ ಇದು ಅಂಗೀಕೃತವಲ್ಲ).

ಆದರೆ ಬಹುತೇಕ ವಿದ್ವಾಂಸರು ಫರ್ದ್ ಮತ್ತು ವಾಜಿಬ್‌ನ ಮಧ್ಯೆ ಯಾವುದೇ ವ್ಯತ್ಯಾಸ ಮಾಡದೆ ಎರಡೂ ಒಂದೇ ಅರ್ಥ ಕೊಡುವ ಸಮಾನ ಪದಗಳು ಎಂದು ಪ್ರತಿಪಾದಿಸಿದ್ದಾರೆ. ನಿರ್ವಹಿಸಿದರೆ ಪುಣ್ಯ ಸಿಗುವ ಮತ್ತು ತೊರೆದರೆ ಶಿಕ್ಷೆ ವಿಧಿಸಲ್ಪಡುವ ಸಂಗತಿಯನ್ನು ಫರ್ದ್ ಎಂದೂ ವಾಜಿಬ್ ಎಂದೂ ಕರೆಯುವುದು ಸಾಮಾನ್ಯವಾಗಿದೆ.

ಇವೆರಡು ಪದಗಳಿಗೆ ಕನ್ನಡದಲ್ಲಿ ನಾವು "ಕಡ್ಡಾಯ" ಎಂದೇ ಹೇಳುವುದು ರೂಢಿ. ಇಮಾಮ್ ಶೀರಾಝಿ(ರ) ಹೇಳುವುದು ಗಮನಿಸಿ: ಫರ್ದ್, ವಾಜಿಬ್ ಮಕ್‌ತೂಬ್ ಈ ಮೂರರಲ್ಲಿ ಯಾವುದನ್ನು ತೊರೆದರೂ ವ್ಯಕ್ತಿ ಶಿಕ್ಷಾರ್ಹನಾಗುವನು (ಅಲ್‌ಇಹ್ಕಾಂ ಫೀಉಸೂಲಿಲ್ ಅಹ್ಕಾಮ್ 1-99).

**-ಶೈಖ್ ಸಾಲಿಹ್ ಅಲ್ ಮುನಜ್ಜಿದ್**



# ಪ್ರವಾದಿ ಮುಹಮ್ಮದ್(ಸ)ರ ವಿವಾಹಗಳು

ಮೂಲ: ಮುಹಮ್ಮದ್ ಅಮಾನಿ ಮೌಲವಿ
ಕನ್ನಡಕ್ಕೆ: ಇಸ್ಮಾಯೀಲ್ ಶಾಫಿ

## 6. ಜುವೈರಿಯ್ಯ ಬಿಂತ್ ಹಾರಿಸ್(ರ)

ಹಿಜ್ರಾ 5ನೇ ವರ್ಷದಲ್ಲಿ ಪ್ರವಾದಿ(ಸ)ರು ಜುವೈರಿಯ್ಯ(ರ)ರನ್ನು ವಿವಾಹವಾದರು. ಬನೂ ಮುಸ್ತಲಖ್ ಗೋತ್ರದ ಪ್ರಮುಖನಾಗಿದ್ದ ಹಾರಿಸ್ ಎಂಬಾತನ ಪತ್ನಿಯಾಗಿದ್ದರು ಜುವೈರಿಯ್ಯ(ರ). ಹಾರಿಸ್ ತನ್ನ ಬೃಹತ್ ಸೇನೆಯೊಂದಿಗೆ ಪ್ರವಾದಿ(ಸ)ರ ವಿರುದ್ಧ ಯುದ್ಧ ಹೂಡುತ್ತಾನೆ. ಮುರೈಸಿಅ್ ಎಂಬ ಸ್ಥಳದಲ್ಲಿ ಮುಸ್ಲಿಮ್ ಸೇನೆ ಅವರನ್ನು ಎದುರ್ಗೊಂಡಿತು. ಪ್ರವಾದಿ(ಸ)ರು ಅವರನ್ನು ಇಸ್ಲಾಮಿಗೆ ಆಹ್ವಾನಿಸಿದರು. ಆದರೆ ಅವರು ನಿರಾಕರಿಸಿದರು. ಯುದ್ಧದಲ್ಲಿ ಅವರು ಪರಾಜಿತರಾದರು. ಈ ಯುದ್ಧದಲ್ಲಿ ಮುಸ್ಲಿಮರಿಗೆ ಸೆರೆ ಸಿಕ್ಕಿದವರ ಪೈಕಿ ಜುವೈರಿಯ್ಯ ಕೂಡಾ ಇದ್ದರು. ಅವರು ಸಾಬಿತ್(ರ)ರವರಿಗೆ ಸಿಕ್ಕಿದ ಪಾಲಿನಲ್ಲಿ ಸೇರಿದ್ದರು. ಏಳು "ಊಕಿಯಃ" ಚಿನ್ನವನ್ನು ವಿಮೋಚನಾ ಮೌಲ್ಯವಾಗಿ ನಿಶ್ಚಯಿಸಿ ಜುವೈರಿಯ್ಯರನ್ನು ಬಿಡುಗಡೆಗೊಳಿಸಲು ಸಾಬಿತ್(ರ) ತೀರ್ಮಾನಿಸಿದರು. ಪ್ರಸ್ತುತ ವಿವಾಹ ಮೌಲ್ಯವನ್ನು ಪಾವತಿಸಲಿಕ್ಕಾಗಿ ತನಗೆ ಸಹಾಯ ಮಾಡಬೇಕೆಂದು ಅಪೇಕ್ಷಿಸಲು ಜುವೈರಿಯ್ಯ ಕಂಡುಹಿಡಿದಿದ್ದು ಪ್ರವಾದಿ(ಸ)ರನ್ನಾಗಿತ್ತು. ಅವರು ಪ್ರವಾದಿ(ಸ)ರ ಬಳಿ ಹೋಗಿ ತನ್ನ ಗೋತ್ರ ಮಹಿಮೆ ಮುಂತಾದವುಗಳನ್ನು ನೆನಪಿಸಿ ಸಹಾಯಕ್ಕಾಗಿ ಅಪೇಕ್ಷಿಸಿದರು. ಅದನ್ನೆಲ್ಲಾ ಗಣನೆಗೆ ತೆಗೆದುಕೊಂಡ ಪ್ರವಾದಿ(ಸ)ರು ಆಕೆಯ ಅಪೇಕ್ಷೆಯನ್ನು ಮನ್ನಿಸಿ ಮೌಲ್ಯವನ್ನು ಪಾವತಿಸಲಿಕ್ಕಾಗಿ ಸಹಾಯ ಮಾಡಿದರು. ಆ ಬಳಿಕ ಜುವೈರಿಯ್ಯ ಮತ್ತು ಕುಟುಂಬದ ಗೌರವ ಹಾಗೂ ಕೀರ್ತಿ ಹಿಂದಿಗಿಂತಲೂ ಹೆಚ್ಚು ಶೋಭಿಸುವಂತೆ ಪ್ರವಾದಿ(ಸ)ರು ಅವರನ್ನು ವಿವಾಹವಾದರು.

ಈ ವಿವಾಹದ ಮೂಲಕ ಪ್ರವಾದಿ(ಸ)ರವರ ಸಂಬಂಧಿಕರಾಗಿ ಮಾರ್ಪಟ್ಟ ಮುಸ್ತಲಕ್ ಗೋತ್ರದವರ ಪೈಕಿ ಯುದ್ಧದಲ್ಲಿ ಬಂಧನಕ್ಕೊಳಗಾದ ಮತ್ತು ಸಹಾಬಿಗಳ ಮಧ್ಯೆ ಪಾಲು ಗಟ್ಟಲ್ಪಟ್ಟ ಎಲ್ಲರನ್ನೂ ಬಿಡುಗಡೆಗೊಳಿಸಲಾಯಿತು. ಮಾತ್ರವಲ್ಲ, ಮುಸ್ತಲಕ್ ಗೋತ್ರದವರು ಸಂತೋಷಭರಿತರಾಗಿ ಅಲ್ಲಾಹನಿಗೆ ಕೃತಜ್ಞತೆಯರ್ಪಿಸುವ ಸಲುವಾಗಿ ಸಾಮೂಹಿಕವಾಗಿ ಇಸ್ಲಾಮನ್ನು ಅಂಗೀಕರಿಸಿದರು.

## 7. ಉಮ್ಮು ಹಬೀಬ ಯಾನೆ ರಮ್ಲ(ರ)

ಕುರೈಶಿ ಅರಬರಲ್ಲಿ ಅಬೂ ಸುಫ್ಯಾನ್(ರ)ರಿಗಿದ್ದ ಸ್ಥಾನಮಾನಗಳು ಮತ್ತು ಮಕ್ಕಾ ವಿಜಯದಲ್ಲಿ ಅವರು ಮುಸ್ಲಿಮ್ ಆಗಿ ಪರಿವರ್ತನೆಗೊಳ್ಳುವ ವರೆಗೆ ಪ್ರವಾದಿ(ಸ) ಹಾಗೂ ಮುಸ್ಲಿಮರ ವಿರುದ್ಧದ ಆಕ್ರಮಣಗಳಲ್ಲಿ ಅವರು ವಹಿಸಿದ್ದ ಪಾತ್ರಗಳು ಇತಿಹಾಸ ಪ್ರಸಿದ್ಧವಾಗಿದೆ. ಅವರ ಮಗಳಾದ ಉಮ್ಮು ಹಬೀಬ(ರ) ಮೊದಮೊದಲು ಇಸ್ಲಾಮನ್ನು ಅಂಗೀಕರಿಸಿದವರಲ್ಲಿ ಸೇರಿದವರಾಗಿದ್ದಾರೆ. ಮೊದಲ ಪತಿಯಾಗಿದ್ದ ಉಬೈದುಲ್ಲಾಹಿಬ್‌ನುಲ್ ಜಹ್‌ಶೀ ಎಂಬವರೊಂದಿಗೆ ಅವರು ಸಹ ಅಬಿಸೀನಿಯಾದ ಎರಡನೇ ಹಿಜ್ರಾದಲ್ಲಿ ಪಾಲ್ಗೊಂಡಿದ್ದರು. ಉಬೈದುಲ್ಲಾ ಅಬಿಸೀಯಾಕ್ಕೆ ಹೋದ ಮೇಲೆ ಕ್ರೈಸ್ತ ಧರ್ಮವನ್ನು ಸ್ವೀಕರಿಸಿದ್ದರು. ನಿರಾಶ್ರಿತರಾದ ರಮ್ಲಃ ತನ್ನ ಸಂಕಷ್ಟಗಳನ್ನೆಲ್ಲಾ ಕಡೆಗಣಿಸಿ ಇಸ್ಲಾಮಿನಲ್ಲೇ ಸ್ಥಿರವಾಗಿ ನಿಂತರು. ಅವರಿಗೆ ಹಬೀಬ್ ಎಂಬ ಹೆಸರಿನ ಒಂದು ಮಗುವಿತ್ತು. ಹಾಗಾಗಿ ಅವರನ್ನು ಉಮ್ಮು ಹಬೀಬ ಎಂದು ಕರೆಯಲಾಗುತ್ತಿತ್ತು. ಇಸ್ಲಾಮಿನ ಪರಮ ಶತ್ರುಗಳಾಗಿದ್ದ ಮಾತಾಪಿತರನ್ನೂ ಕುಟುಂಬವನ್ನೂ ತ್ಯಜಿಸಿ ತೌಹೀದ್‌ನ ವಿಶ್ವಾಸವನ್ನು ಉಳಿಸಲಿಕ್ಕಾಗಿ ತನ್ನ ಏಕೈಕ ಆಧಾರವಾಗಿದ್ದ ಪತಿಯೊಂದಿಗೆ ಕಡಲನ್ನು ದಾಟಿ ವಿದೂರ ಪ್ರದೇಶಕ್ಕೆ ವಲಸೆ ಹೋದ ಬಳಿಕ ಪತಿಯೂ ತನ್ನ ಕಠಿಣ ಶತ್ರುವಾಗಿ ಮಾರ್ಪಟ್ಟ ಮೇಲೆ ಅಬಲೆಯಾದ ಆ ಮಹಿಳೆಯ ಸ್ಥಿತಿ ಏನಾಗಿರಬಹುದು? ಕೈಯಲ್ಲೊಂದು ಹಸುಗೂಸು! ಆ ನಾಡಿನ ನಿವಾಸಿಗಳಾದರೋ ಕ್ರೈಸ್ತ ಮತಾವಲಂಬಿಗಳು!

ಅಬಿಸೀನಿಯಾದ ಚಕ್ರವರ್ತಿಯಾದ ನಜ್ಜಾಶಿಯನ್ನು ಇಸ್ಲಾಮಿಗೆ ಆಹ್ವಾನಿಸಲಾದ ಪತ್ರದೊಂದಿಗೆ ಪ್ರವಾದಿ(ಸ)ರು ದೂತನನ್ನು ಕಳುಹಿಸಿದ್ದರು. ನಜ್ಜಾಶಿ ಮುಸ್ಲಿಮ್ ಆದರು. ಅವರು ಪ್ರವಾದಿ(ಸ)ರಿಗಾಗಿ ಉಮ್ಮು ಹಬೀಬರಿಗೆ 400 ದೀನಾರ್ ಮಹ್ರ್ ಕೊಟ್ಟು ಉಸ್ಮಾನ್(ರ)ರವರ ಉಪಸ್ಥಿತಿಯಲ್ಲಿ ಪ್ರವಾದಿ(ಸ)ರಿಗಾಗಿ ಅವರ ವಿವಾಹ ಕಾರ್ಯವನ್ನು ನಡೆಸಲಾಯಿತು. (ಆ ಹಿಜ್ರಾದಲ್ಲಿ ಉಸ್ಮಾನ್(ರ)ರವರು ಕೂಡಾ ಪಾಲ್ಗೊಂಡಿದ್ದರು.). ಪ್ರವಾದಿ(ಸ)ರ ಅಪೇಕ್ಷೆಯಂತೆ ಉಮ್ಮು ಹಬೀಬ(ರ)ರವರು ಶುರಹ್‌ಬೀಲುಬ್‌ನು ಹಸನಃ(ರ)ರೊಂದಿಗೆ ಪ್ರವಾದಿ(ಸ)ರ ಬಳಿಗೆ ಮರಳಿದರು. ಈ ಘಟನೆ ನಡೆದದ್ದು ಹಿಜ್ರಾ 7ನೇ ವರ್ಷದಲ್ಲಾಗಿತ್ತು. ಹಿಜ್ರಾ 44ನೇ ವರ್ಷದಲ್ಲಿ ಅವರು ಇಹಲೋಕ ತ್ಯಜಿಸಿದರು.

## 8. ಸಫಿಯ್ಯ(ರ)

ಪ್ರವಾದಿ(ಸ)ರು ಹಿಜ್ರಾ 7ರಲ್ಲಿ ಸಫಿಯ್ಯ(ರ)ರನ್ನು ವಿವಾಹವಾದರು. ಸಫಿಯ್ಯ(ರ)ರ ತಂದೆ ಹುಯಯ್ಯ್ ಇಸ್ರಾಈಲರಾದ ಯಹೂದರ ಓರ್ವ ನಾಯಕ ಮತ್ತು ನದೀರ್ ಗೋತ್ರದ ಪ್ರಮುಖನಾಗಿದ್ದ. ಅಹ್‌ಝಾಬ್ ಯುದ್ಧ ಮುಂತಾದವುಗಳಲ್ಲಿ ಇಸ್ಲಾಮಿಗೆ ವಿರುದ್ಧವಾದ ವಿಷಯಗಳಲ್ಲಿ ಹುಯಯ್ಯ್‌ನ ಪಾತ್ರ ಗಮನೀಯವಾಗಿದೆ. ಸಫಿಯ್ಯ(ರ)ರ ಮಾಜಿ ಪತಿ ಕಿನಾನಃ ಖೈಬರ್ ಯುದ್ಧದಲ್ಲಿ ಕೊಲ್ಲಲ್ಪಟ್ಟು ಸಫಿಯ್ಯ(ರ) ಯುದ್ಧ ಖೈದಿಯಾಗಿ ಸೆರೆ ಹಿಡಿಯಲ್ಪಟ್ಟರು. ದೊಡ್ಡ ಗೋತ್ರವೊಂದರ ಪ್ರಮುಖನೂ ಒಂದು ಸಮುದಾಯದ ನಾಯಕನೂ ಆಗಿದ್ದ ವ್ಯಕ್ತಿಯೊಬ್ಬರ ವಿಧವೆಯಾಗಿ ಮಾರ್ಪಟ್ಟ ಮಗಳಿಗೆ ಗುಲಾಮಗಿರಿಯ ಜೀವನ ಅದೆಷ್ಟು ವೇದನಾಜನಕವಾಗಿರಬಹುದೆಂಬುದನ್ನು ಹೇಳಬೇಕಾದ್ದಿಲ್ಲ. ಪ್ರವಾದಿ(ಸ)ರು ಆಕೆಯನ್ನು ಗುಲಾಮಗಿರಿಯಿಂದ ವಿಮೋಚನೆಗೊಳಿಸಿದರಲ್ಲದೆ ಆ ವಿಮೋಚನೆಯನ್ನೇ ಮಹ್ರಾಗಿ ನಿಶ್ಚಯಿಸಿ ಆಕೆಯನ್ನು ವಿವಾಹವಾದರು. ಯುದ್ಧದಲ್ಲಿ ಸೆರೆ ಸಿಕ್ಕವರನ್ನು ಪಾಲುಗಟ್ಟಿದವರ ಪೈಕಿ ಸಫಿಯ್ಯ(ರ)ರವರು ದಹ್‌ಯತ್ತುಲ್ ಕಲ್‌ಬಿ(ರ) ಎಂಬ ಸಹಾಬಿಯ ಪಾಲಿನಲ್ಲಿ ಸೇರಿದ್ದರು. ಪ್ರವಾದಿ(ಸ)ರು ಆಕೆಯನ್ನು ದಹ್‌ಯತ್(ರ) ಬಳಿಯಿಂದ ಬೆಲೆಕೊಟ್ಟು ಖರೀದಿಸಿ ವಿವಾಹವಾದದ್ದೆಂದು ಹೇಳಲಾಗಿದೆ. ಏನಿದ್ದರೂ ಈ ವಿವಾಹದಿಂದಾಗಿ ನದೀರ್ ಗೋತ್ರವು ಇಸ್ಲಾಮನ್ನು ಸ್ವೀಕರಿಸಿತು.

## 9. ಮೈಮೂನ ಬಿಂತ್ ಹಾರಿಸ್(ರ)

ಪ್ರವಾದಿ(ಸ)ರ ಕೊನೆಯ ಪತ್ನಿಯಾದ ಮೈಮೂನ(ರ)ರವರ ವಿವಾಹವು ಹಿಜ್ರಾ 7ನೇ ವರ್ಷದಲ್ಲಿ ನಡೆಯಿತು. ಅಂದು ಅವರಿಗೆ ಸುಮಾರು 50 ವರ್ಷ ವಯಸ್ಸಾಗಿರಬಹುದು. ಅವರ ಸಹೋದರಿಯಾದ ಲುಬಾಬಃ(ರ)ರವರು "ಅಲ್ಲಾಹನ ಖಡ್ಗ" ಎಂಬ ಕೀರ್ತಿಗೆ ಪಾತ್ರರಾದ ಖಾಲಿದುಬ್‌ನುಲ್ ವಲೀದ್(ರ)ರ ತಾಯಿ. ಖಾಲಿದ್(ರ)ರ ಇಸ್ಲಾಮ್ ಸ್ವೀಕಾರಕ್ಕೆ ಈ ವಿವಾಹವು ಕಾರಣವಾಗಿತ್ತು. ಆಕೆಯನ್ನು ಮೊದಲು ಒಬ್ಬರು ವಿವಾಹವಾಗಿ ಬಿಡುಗಡೆ ಮಾಡಿದ್ದರು. ಬಳಿಕ ಅಬೂರಹ್ಮ್ ಎಂಬವರು ವಿವಾಹವಾದರು. ಅವರು ಮರಣಾ ನಂತರ ಆಕೆಯನ್ನು ಪ್ರವಾದಿ(ಸ)ರು ವಿವಾಹವಾದರು. ಈ ವಿವಾಹದಿಂದಾಗಿ ಮೈಮೂನ(ರ)ರ ಕುಟುಂಬಕ್ಕೆ ಬಹಳಷ್ಟು ಮಹತ್ವ ಬಂದಿದೆ. ಅವರ ದಯನೀಯವಾದ ದಾರಿದ್ರ್ಯ ಹಾಗೂ ಹಸಿವು ಕೊನೆಗೊಳ್ಳಲಿಕ್ಕೂ ಮುಸ್ಲಿಮರ ಕುರಿತಾಗಿದ್ದ ಅವರ ಅತಿಯಾದ ಭಯ ತೊಲಗಲಿಕ್ಕೂ ಇದು ಕಾರಣವಾಯಿತು. (ಮುಂದುವರಿಯುವುದು)

## ಹಿಜ್ರಾ: ಇತಿಹಾಸ ಮತ್ತು ಸಂದೇಶ

(7ನೇ ಪುಟದಿಂದ)

ಅವರ ಮಧ್ಯೆ ಸಂಧಾನ, ಒಡಂಬಡಿಕೆಗಳನ್ನುಂಟು ಮಾಡಿ ಪರಸ್ಪರ ಪ್ರೀತಿ, ಗೌರವ ದಿಂದ ಜೀವಿಸಲು ಕಲಿಸಿದ ಪ್ರವಾದಿ(ಸ)ರು, ಇತಿಹಾಸದಲ್ಲಿ ಸಾಟಿಯಿಲ್ಲದ ಸಹೋದರ ಸಂಬಂಧಗಳನ್ನು ಬೆಳೆಸಿದರಲ್ಲದೆ, ಇತರರಿಂದ ಅಕ್ರಮಿಸಲ್ಪಡುವವರಿಗೆ ರಕ್ಷಣೆ ಹಾಗೂ ಭದ್ರತೆ ನೀಡುವ ರೀತಿಯಲ್ಲಿ ಆ ಸಮುದಾಯವನ್ನು ಸಂಸ್ಕರಿಸಿದರು. ಹೀಗೆ ತಮ್ಮ ಸಹೋದರರಿಗಾಗಿ ತಮ್ಮ ಹಿತಾಸಕ್ತಿಗಿಂತಲೂ ಹೆಚ್ಚು ಮಹತ್ವ ನೀಡಲು ಮತ್ತು ದೇವ ಸಂಪ್ರೀತಿ ಬಯಸಿ ಇತರರನ್ನು ಪ್ರೀತಿಸಲು ಆ ಸಮುದಾಯಕ್ಕೆ ಸಾಧ್ಯವಾಯಿತು.

### ಹಿಜ್ರಾದ ಸಂದೇಶ

ತನ್ನನ್ನು ಸೃಷ್ಟಿಸಿ ಸಂರಕ್ಷಿಸುತ್ತಿರುವ ಪರಮ ದಯಾಮಯನಾದ ಅಲ್ಲಾಹನ ಪ್ರೀತಿಗಾಗಿ ಸರ್ವಸ್ವವನ್ನು ತ್ಯಜಿಸಲು ಮತ್ತು ಅವನ ದೀನಿಗಾಗಿ ಆತ್ಮಾರ್ಥವಾಗಿ ಸೇವೆ ಗೈಯ್ಯಲು ಸನ್ನದ್ಧನೆಂಬ ಪ್ರಾಯೋಗಿಕ ಘೋಷಣೆಯಾಗಿದೆ ಹಿಜ್ರಾ.

ಆದರ್ಶಕ್ಕಾಗಿ ನಾಡು, ಬೀಡು, ಕುಟುಂಬ, ಸಂಪತ್ತು ಎಲ್ಲವನ್ನೂ ತ್ಯಜಿಸಿ ತೀಕ್ಷ್ಣವಾದ ಹಸಿವು, ದಾಹ, ಸಂಕಷ್ಟಗಳನ್ನೆಲ್ಲಾ ಸಹಿಸಿ ಸಾಗುವ ಮರುಭೂಮಿಯ ಪಯಣ ವಿವರಣಾತೀತವಾಗಿದೆ. ಪ್ರಥಮವಾಗಿ ಹಿಜ್ರಾ ಹೋದ ಅಬೂಸಲಮ - ಉಮ್ಮು ಸಲಮ ದಂಪತಿಗೆ ಅವರ ಕುಟುಂಬದಿಂದ ಅನುಭವಿಸಬೇಕಾಗಿ ಬಂದ ಪೀಡನೆ, ಮರ್ದನಗಳು ಅಸಹನೀಯವಾಗಿದ್ದವು. ಪರಸ್ಪರ ಎಳೆದಾಟದಿಂದಾಗಿ ಮಗುವಿನ ಕೈ ತುಂಡರಿಸಲ್ಪಟ್ಟು, ಪತ್ನಿಯನ್ನು ಏಕಾಂಗಿಯಾಗಿಸಿ ಹಿಜ್ರಾ ಹೋಗಬೇಕಾಗಿ ಬಂದ ಅಬೂ ಸಲಮ(ರ)ರವರ ವಿರಹ ವೇದನೆ ಮತ್ತು ಮುದ್ದು ಮಗುವಿನ ಕೈ ತುಂಡಾಗಿ ಮನೋವೇದನೆ ಅನುಭವಿಸಬೇಕಾಗಿ ಬಂದ ಉಮ್ಮು ಸಲಮ(ರ)ರವರ ಹೃದಯಾಂತರಾಳದ ರೋಧನಗಳು ಅದೆಷ್ಟು ಹೃದಯವಿದ್ರಾವಕವಾಗಿರಬಹುದು! ಸಕಲ ಸಂಪತ್ತುಗಳನ್ನು ಬಿಟ್ಟುಕೊಟ್ಟು ಸವಾಲೊಡ್ಡಿ ಹಿಜ್ರಾ ಹೋದ ಸುಹೈಬ್(ರ)ರವರು ಅಲ್ಲಾಹು ಮತ್ತು ಪ್ರವಾದಿ(ಸ)ರೊಂದಿಗಿನ ತನ್ನ ಬಾಧ್ಯತೆಯನ್ನು ಪೂರ್ತೀಕರಿಸಿದ್ದರು.

ಅರ್ಪಣಾ ಮನೋಭಾವ ಮತ್ತು ಸಹನೆಯಿದ್ದರೆ ಅಲ್ಲಾಹನ ಸಹಾಯ ಮತ್ತು ಯಶಸ್ಸು ಖಂಡಿತವೆಂಬುದನ್ನು ಹಿಜ್ರಾ ಸ್ಪಷ್ಟ ಪಡಿಸುತ್ತದೆ. ಶತ್ರುಗಳಿಗೆ ತಿಳಿಯದೆಯೇ ಅವರ ಮುಂದಿನಿಂದ ಹೊರಟು ಹೋಗುವಾಗಲೂ ಸೌರ್ ಗುಹೆಯಲ್ಲಿ ಅವಿತಿದ್ದಾಗಲೂ ಅಲ್ಲಾಹನ ಕಾವಲು ಅವರನ್ನು ರಕ್ಷಿಸಿತ್ತು. ಅದೇ ರೀತಿ ನೆರಳಿಗಾಗಿ ಬಂಡೆಯುಂಟಾದುದು, ದಾಹ ತೀರಿಸಲು ಹಾಲು ಸಿಕ್ಕಿದ್ದು ಮತ್ತು ಸುರಾಖತ್‌ಬ್‌ನು ಮಾಲಿಕ್‌ನ ಕುದುರೆಯ ಕಾಲುಗಳು ಭೂಮಿಯಲ್ಲಿ ಹೂತು ಹೋದದ್ದು ಅಲ್ಲಾಹನ ಸಹಾಯದಿಂದಾಗಿತ್ತು. ಅಲ್ಲಾಹನಲ್ಲಿ ಭರವಸೆಯಿಡುವ ಭಕ್ತರಿಗೆ ಅಲ್ಲಾಹು ದಾರಿ ತೋರಿಸುತ್ತಾನೆಂಬುದರಲ್ಲಿ ಸಂದೇಹವಿಲ್ಲ. ಎಲ್ಲವನ್ನೂ ಬಿಟ್ಟು ದೇವ ಸಂಪ್ರೀತಿಗಾಗಿ ಹಿಜ್ರಾ ಹೋದವರಿಗೆ ಸ್ನೇಹಭರಿತವಾದ ಬಂಧುಗಳನ್ನು ನೀಡಲಾಗುವುದು ಮಾತ್ರವಲ್ಲ, ಇಹದಲ್ಲಿ ಅವರು ಸಂಪನ್ನರಾಗುವರು ಮತ್ತು ಪರದಲ್ಲಿ ಅವರಿಗೆ ಮಹತ್ತರ ಸ್ಥಾನಮಾನ-ಪದವಿಗಳನ್ನು ನೀಡಲಾಗುವುದೆಂದು ಪವಿತ್ರ ಕುರ್‌ಆನ್ ಘೋಷಿಸಿತು. ಕೊನೆಯಲ್ಲಿ ಅಗಲಿ ಹೋದ ತಾಯ್ನಾಡು ಮಕ್ಕಾ ಮುಸ್ಲಿಮರ ವಶವಾಯಿತು. ●




ಪ್ರೊ ಪಿ. ಅಬ್ದುಲ್ಲ.          ಕನ್ನಡಕ್ಕೆ: ಇಬ್‌ನು ಮೊಹಿದ್ದೀನ್

# ಉಪವಾಸ ವ್ರತ

### 1. ಗುರಾಣಿ:

قَالَ رَسُولُ الله ﷺ : الصِّيَامُ جُنَّةٌ يَسْتَجِنُّ بِهَا العَبْدُ مِنَ النَّارِ. (احمد)

ರಸೂಲುಲ್ಲಾಹಿ(ಸ)ರು ಹೇಳಿದರು: "ಉಪವಾಸ ವ್ರತವು ಒಂದು ಗುರಾಣಿಯಾಗಿದೆ. ಅದು ಒಬ್ಬ ದಾಸನಿಗೆ ನರಕದಿಂದ ರಕ್ಷಣೆ ನೀಡುತ್ತದೆ" (ಅಹ್ಮದ್).

### 2. ಸಹನೆ:

قَالَ رَسُولُ الله ﷺ وَهُوَ شَهْرُ الصَّبْرِ ثَوَابُهُ الجَنَّةُ. (ابن خزيمة وابن حبان)

ರಸೂಲುಲ್ಲಾಹಿ(ಸ)ರು ಹೇಳಿದರು: "ರಮದಾನ್ ಸಹನೆಯ ತಿಂಗಳಾಗಿದೆ. ಸಹನೆಯ ಪ್ರತಿಫಲ ಸ್ವರ್ಗವಾಗಿದೆ" (ಇಬ್‌ನು ಖುಸೈಮ, ಇಬ್‌ನು ಹಿಬ್ಬಾನ್).

### 3. ಪಾಪ ವಿಮೋಚನೆ:

قَالَ رَسُولُ الله ﷺ مَنْ صَامَ رَمَضَانَ إِيمَانًا وَاحْتِسَابًا فَغُفِرَ لَهُ مَا تَقَدَّمَ مِنْ ذَنْبِهِ.(البخاري ومسلم ومالك وابوداود والنسائي والترمذي)

ರಸೂಲುಲ್ಲಾಹಿ(ಸ)ರು ಹೇಳಿದರು: "ಸತ್ಯವಿಶ್ವಾಸ ಮತ್ತು ಪ್ರತಿಫಲ ಇಚ್ಛೆಯೊಂದಿಗೆ ಯಾರು ರಮದಾನಿನ ಉಪವಾಸ ವ್ರತವನ್ನು ಆಚರಿಸುತ್ತಾನೋ ಅವನ ಗತ ಪಾಪಗಳಿಗಾಗಿ ಅವನಿಗೆ ಕ್ಷಮೆ ನೀಡಲಾಗುವುದು" (ಬುಖಾರಿ, ಮುಸ್ಲಿಮ್, ಮಾಲಿಕ್, ಅಬೂದಾವೂದ್, ನಸಾಈ, ತುರ್ಮುದಿ).

### 4. ಸಹರಿ:

قَالَ رَسُولُ الله ﷺ: السُّحُورُ بَرَكَةٌ وَلاَ تَدَعُوهُ وَلَوْ أَنْ يَجْرَعَ أَحَدُكُمْ جُرْعَةً مِنْ مَاءٍ فَإِنَّ الله وَمَلَئِكَتَهُ يُصَلُّونَ عَلَى المُسَحِّرِينَ. (احمد)

ರಸೂಲುಲ್ಲಾಹಿ(ಸ)ರು ಹೇಳಿದರು: "ಸಹರಿಯು ಸಂಪೂರ್ಣ ಸಮೃದ್ಧಿಯಾಗಿದೆ. ಸ್ವಲ್ಪ ನೀರು ಕುಡಿದಾದರೂ ನೀವದನ್ನು ಉಪೇಕ್ಷಿಸಬೇಡಿರಿ. ಉಣ್ಣುವವರ ಮೇಲೆ ಅಲ್ಲಾಹು ಮತ್ತು ಅವನ ಮಲಕ್‌ಗಳು ಒಳಿತನ್ನು ವರ್ಷಿಸುವರು" (ಅಹ್ಮದ್).

### 5.. ಉಪವಾಸ ವ್ರತವನ್ನು ತೊರೆಯುವುದು:

ذَهَبَ الظَّمَأُ وَابْتَلَّتِ العُرُوقُ وَثَبَتَ الأَجْرُ إِنْشَاءَ الله. (ابوداود)

"ದಾಹವು ನೀಗಿತು. ನರನಾಡಿಗಳು ನೆನೆದವು. ಅಲ್ಲಾಹನಿಚ್ಛಿಸಿದರೆ ಪ್ರತಿಫಲವು ನಿಶ್ಚಿತವಾಯಿತು" (ಅಬೂದಾವೂದ್).

### 6. ತರಾವೀಹ್ (ಖಿಯಾಮುಲ್ಲೈಲ್:

قَالَ رَسُول الله ﷺ مَنْ قَامَ رَمَضَانَ إِيمَانًا وَاحْتِسَابًا فَغُفِرَ لَهُ مَا تَقَدَّمَ مِنْ ذَنْبِهِ. (البخاري ومسلم)

ರಸೂಲುಲ್ಲಾಹಿ(ಸ)ರು ಹೇಳಿದರು: "ಸತ್ಯವಿಶ್ವಾಸ ಹಾಗೂ ಪ್ರತಿಫಲದ ಇಚ್ಛೆಯೊಂದಿಗೆ ಯಾರು ರಮದಾನಿನಲ್ಲಿ ರಾತ್ರಿ ನಮಾಝ್(ತರಾವೀಹ್) ನಿರ್ವಹಿಸುತ್ತಾನೋ ಆತನ ಗತ ಪಾಪಗಳು ಆತನಿಗೆ ಕ್ಷಮಿಸಲ್ಪಡುವುದು".

### 7. ಲೈಲತುಲ್ ಕದ್ರ್:

قَالَ رَسُول الله ﷺ مَنْ قَامَ فِي لَيْلَةُ القَدْرِ إِيمَانًا وَاحْتِسَابًا فَغُفِرَ لَهُ مَا تَقَدَّمَ مِنْ ذَنْبِه. (البخاري ومسلم)

ರಸೂಲುಲ್ಲಾಹಿ(ಸ)ರು ಹೇಳಿದರು: "ಸತ್ಯವಿಶ್ವಾಸ ಹಾಗೂ ಪ್ರತಿಫಲದ ಇಚ್ಛೆಯೊಂದಿಗೆ ಯಾರೂ ಲೈಲತ್ತುಲ್ ಕದ್ರ್‌ನಲ್ಲಿ ರಾತ್ರಿ ನಮಾಝ್ ನಿರ್ವಹಿಸುತ್ತಾನೋ ಆತನ ಗತ ಪಾಪಗಳು ಕ್ಷಮಿಸಲ್ಪಡುವುವು" (ಬುಖಾರಿ, ಮುಸ್ಲಿಮ್). ರಮದಾನಿನ ಕೊನೆಯ ಹತ್ತರಲ್ಲಿ ಸಾಮಾನ್ಯವಾಗಿಯೂ ಕೆಳಗಿನ ಪ್ರಾರ್ಥನೆಯನ್ನು ಹೆಚ್ಚಿಸಬೇಕು. ಇತರ ಸಂದರ್ಭಗಳಲ್ಲೂ ಪ್ರಾರ್ಥಿಸಬಹುದು.

اللَّهُمَّ إِنَّكَ عَفُوٌّ، تُحِبُّ العَفْوَ، فَاعْفُ عَنِّي. (احمد والترمذي)

ಓ ಅಲ್ಲಾಹ್, ನೀನು ಕ್ಷಮೆ ನೀಡುವವನಾಗಿರುವೆ, ನೀನು ಕ್ಷಮೆಯನ್ನು ಇಷ್ಟಪಡುವವನಾಗಿರುವೆ. ಆದ್ದರಿಂದ ನನಗೆ ನೀನು ಕ್ಷಮೆ ನೀಡು" (ಅಹ್ಮದ್, ತಿರ್ಮುದಿ).

### 8. ಇಅ್‌ತಿಖಾಫ್:

عن عائِشَةَ رضي الله عنها كَانَ يَعْتَكِفُ العَشْرَ الأَوَاخِرَ مِنْ رَمَضَانَ حَتَّى تَوَفَّاهُ الله ثُمَّ اعْتَكَفَ أَزْوَاجُهُ مِنْ بَعْدِهِ. (البخاري)

ಆಯಿಶಾ(ಸ)ರಿಂದ ವರದಿ: "ಪ್ರವಾದಿ(ಸ)ರು ಮರಣದ ವರೆಗೂ ರಮದಾನಿನ ಕೊನೆಯ ಹತ್ತರಲ್ಲಿ ಇಅ್‌ತಿಕಾಫ್ ಕುಳಿತಿರುತ್ತಿದ್ದರು. ಆ ಬಳಿಕ ಅವರ ಪತ್ನಿಯರು ಇಅ್‌ತಿಕಾಫ್ ಕುಳಿತಿರುತ್ತಿದ್ದರು" (ಬುಖಾರಿ).

### 9. ಪರೋಪಕಾರ:

عن أَبِي عَبَّاسٍ رضي الله عنه كَانَ النَّبِي ﷺ أَجْوَدَ النَّاسِ بِالخَيْرِ وَكَانَ أَجْوَدَمَا يَكُونُ فِي رَمَضَانَ وَكَانَ أَجْوَدَ بِالخَيْرِ مِنَ الرِّيحِ المُرْسَلَةِ. (البخاري)

ಇಬ್‌ನು ಅಬ್ಬಾಸ್(ಸ)ರಿಂದ ವರದಿ: "ಪ್ರವಾದಿ(ಸ)ರು ಜನರ ಪೈಕಿ ಅತ್ಯಂತ ಉದಾರಿಯಾಗಿದ್ದರು. ಅವರು ರಮದಾನಿನಲ್ಲಿ ರಭಸವಾಗಿ ಬೀಸುವ ಗಾಳಿಯಂತೆ ಅತೀ ಹೆಚ್ಚು ಉದಾರಿಯಾಗುತ್ತಿದ್ದರು" (ಬುಖಾರಿ).

### 10. ಶವ್ವಾಲ್ ತಿಂಗಳ ಆರು ಉಪವಾಸ:

عن أَبِي أَيُّوبُ الأَنْصَارِي رضي الله عنه أَنَّ النَّبِي ﷺ قَالَ مَنْ صَامَ رَمَضَانَ ثُمَّ أَتْبَعَهُ سِتًا مِنْ شَوَّالٍ فَكَأَنَّمَا صَامَ الدَّهْرَ. (مسلم والترمذي وابوداود)

ಅಬೂಅಯ್ಯೂಬುಲ್ ಅನ್ಸಾರಿ(ರ)ರಿಂದ ವರದಿ: "ಪ್ರವಾದಿ(ಸ)ರು ಹೇಳಿದ್ದಾರೆ - ರಮದಾನಿನ ಉಪವಾಸ ವ್ರತ ಮತ್ತು ಶವ್ವಾಲಿನ ಆರು ಉಪವಾಸಗಳನ್ನು ಯಾರು ಆಚರಿಸುತ್ತಾನೋ ಆತ ವರ್ಷವಿಡೀ ಉಪವಾಸ ವ್ರತ ಆಚರಿಸಿದಂತೆ" (ಮುಸ್ಲಿಮ್, ತುರ್ಮುದಿ, ಅಬೂದಾವೂದ್).

### 11. ಅರಫಾ ಉಪವಾಸ ವ್ರತ:

عن أَبِي قَتَادَةَ رَضِي الله عنه قَالَ : سُئِلَ رَسُولُ الله ﷺ عَنْ صَوْمِ عَرَفَة قَالَ : يَكَفِّرُ السَّنَةَ المَاضِيَةَ وَالبَاقِيَةَ. (مسلم)

ಅಬೂಕತಾದ(ರ)ರಿಂದ ವರದಿ: "ಅರಫಾ ದಿನದ (ದುಲ್‌ಹಿಜ್ಜ 9) ಉಪವಾಸ ವ್ರತದ ಕುರಿತು ರಸೂಲುಲ್ಲಾಹಿ(ಸ)ರೊಡನೆ ಕೇಳಲಾಯಿತು. ಅವರು ಹೇಳಿದರು - ಅದು ಹಿಂದಿನ ಹಾಗೂ ಮುಂದಿನ ವರ್ಷಗಳ ಪಾಪಗಳಿಗೆ ಪರಿಹಾರವಾಗಿದೆ" (ಮುಸ್ಲಿಮ್).

### 12. ಆಶೂರಾ, ತಾಸೂಆ:

عَنْ أَبِي قَتَادَةَ رَضِي الله عنه أَنَّ رَسُولُ الله ﷺ سُئِلَ عَنْ صِيَامِ عَاشُورَاءِ؟ فَقَالَ يَكفرُ السَّنَةَ المَاضِيَةَ. (مسلم)

ಅಬೂಕತಾದ(ರ)ರಿಂದ ವರದಿ: ಆಶೂರಾ ಉಪವಾಸ ವ್ರತದ ಕುರಿತು ರಸೂಲುಲ್ಲಾಹಿ(ಸ)ರೊಡನೆ ಕೇಳಲಾಯಿತು. ಅವರು ಹೇಳಿದರು: "ಅದು ಗತ ವರ್ಷದ ಪಾಪಗಳಿಗೆ ಪರಿಹಾರವಾಗಿದೆ" (ಮುಸ್ಲಿಮ್). ಮಾತ್ರವಲ್ಲ ಪ್ರತೀ ಸೋಮವಾರ, ಗುರುವಾರ ಮತ್ತು ಅರಬಿ ತಿಂಗಳ 13, 14, 15ನೇ ತಾರೀಕುಗಳಂದು ಪ್ರವಾದಿ(ಸ)ರು ಉಪವಾಸ ವ್ರತ ಆಚರಿಸುತ್ತಿದ್ದರು. ಸಾಧ್ಯವಾದಷ್ಟು ಈ ಸುನ್ನತ್ತ್ ಉಪವಾಸಗಳನ್ನು ಆಚರಿಸಲು ನಾವು ಶ್ರಮಿಸಬೇಕಾಗಿದೆ.

### 13. ಉಪವಾಸಿಗನೊಂದಿಗೆ ಯಾರಾದರೂ ಜಗಳಾಡುವುದಾದರೆ:

إِنِّي صَائِمٌ، إِنِّي صَائِمٌ (مسلم)

"ನಿಶ್ಚಯವಾಗಿಯೂ ನಾನು ಉಪವಾಸಿಗನಾಗಿದ್ದೇನೆ, ನಿಶ್ಚಯವಾಗಿಯೂ ನಾನು ಉಪವಾಸಿಗನಾಗಿದ್ದೇನೆ" (ಮುಸ್ಲಿಮ್) ಎಂದು ಹೇಳಬೇಕು.

### 14. ಫಿದ್‌ಯಾ:

ಉಪವಾಸ ವ್ರತವನ್ನು ಆಚರಿಸಲು ತೀರಾ ಅಸಾಧ್ಯವಾದವರು ಪ್ರತಿಯೊಂದು ಉಪವಾಸಕ್ಕೆ ಪ್ರಾಯಶ್ಚಿತ್ತವಾಗಿ ಒಬ್ಬ ಬಡವನಿಗೆ ಆಹಾರ ನೀಡಬೇಕು. ಅದು ಕಡಿಮೆಯೆಂದರೆ ಒಂದು ಮುದ್ದ್(500 ಗ್ರಾಮ್) ನಾವು ಉಣ್ಣುವ ಆಹಾರವೆಂದು ವಿದ್ವಾಂಸರು ಲೆಕ್ಕ ಹಾಕಿದ್ದಾರೆ. ಸಾಧ್ಯವಿದ್ದರೆ ಹೆಚ್ಚೂ ಆಗಬಹುದು. ಆಧಾರ: ಮುಹಮ್ಮದ್ ಅಮಾನಿ ಮೌಲವಿಯವರ ಕುರ್‌ಆನ್ ವ್ಯಾಖ್ಯಾನ. ಸೂರಾಃ ಅಲ್‌ಬಕರದ 194ನೇ ಸೂಕ್ತದ ವಿವರಣೆ).

(ಮುಂದುವರಿಯುವುದು)

سلسلة الأحاديث الضعيفة والموضوعة

# ದುರ್ಬಲ ಮತ್ತು ಕೃತಕ ಹದೀಸ್‌ಗಳು

## ಒಂದು ಅವಲೋಕನ ಭಾಗ - 26



## ಆದಮ್ ನಬಿ(ಅ) ಇಳಿದದ್ದು ಭಾರತದಲ್ಲೇ?

ಎಂ.ಇ. ಅಶ್ರಫ್ ಮುಸ್ಲಿಯಾರ್
ಕಾಸರಗೋಡು

ಸ್ವರ್ಗದ ನಿಷೇಧಿತ ವೃಕ್ಷದ ಫಲ ತಿಂದುದರ ಪರಿಣಾಮಾಗಿ ಅಲ್ಲಾಹು ಆದಮ್ ನಬಿ(ಅ) ಅವರನ್ನು ಅಲ್ಲಿಂದ ಹೊರಗಟ್ಟಿದಾಗ ಅವರು ನೇರವಾಗಿ ಬಂದಿಳಿದದ್ದು ಅವಿಭಜಿತ ಭಾರತದ ಭಾಗವಾಗಿದ್ದ ಶ್ರೀಲಂಕಾದಲ್ಲಿ, ಮಾತೆ ಹವ್ವಾ ಉಮ್ಮ ಜಿದ್ದದಲ್ಲಿ ಇಳಿದ ಕಾರಣ ಆ ನಾಡಿಗೆ "ಅಜ್ಜಿ" ಎಂಬ ಹೆಸರಿನ ಜಿದ್ದಾ (ಮೂಲತಃ ಜದ್ದತ್ ಎಂದಾಗಬೇಕು) ಎಂಬ ಹೆಸರು ಬಂದಿದೆಯಂತೆ, ಭೂಲೋಕ ಸೇರಿದ ಬಳಿಕ ಇಬ್ಬರೂ ಪರಸ್ಪರ ಸಂಧಿಸಿದ್ದು ಅರಫಾದಲ್ಲಿ, ಆದುದರಿಂದ ಅರಿತುಕೊಂಡರು ಅಥವಾ "ಪರಸ್ಪರ ಪರಿಚಯ ಮಾಡಕೊಂಡರು" ಎಂಬ ಅರ್ಥದ "ಅರಫ" ಎಂಬ ನಾಮ ಆ ಸ್ಥಳಕ್ಕೆ ಖಾಯಂಗೊಂಡಿತಂತೆ.

ನಾನು ಚಿಕ್ಕಂದಿನಿಂದಲೇ ಹಿರಿಯರು ಹೀಗೆ ಹೇಳುತ್ತಿರುವುದನ್ನು ಕೇಳಿದ್ದೇನೆ. ಆದಂ(ಅ)ರವರ ಚರಿತ್ರೆ ಬರೆಯುವ ಸುನ್ನೀ ಲೇಖಕರು ಈ ಐತಿಹ್ಯಗಳನ್ನು ಬೆರೆಸದೆ ಪುಸ್ತಕ ಪೂರ್ಣಗೊಳಿಸುವುದಿಲ್ಲ. ಇಂತಹ ಉಲ್ಲೇಖಗಳನ್ನು ಮನನ ಮಾಡಿಕೊಂಡ ತಥಾ ಕಥಿತ ಮುಸ್ಲಿಮ್ ವಾಗ್ಮಿಗಳು ಭಾರತದಲ್ಲಿ ಇಸ್ಲಾಮಿನ ಪ್ರಚಾರದ ಕುರಿತು ಮಾತನಾಡುವಾಗಿ ಇಸ್ಲಾಮ್ ಉದಯವಾದುದೇ ಭಾರತದಲ್ಲಿ ಎಂದು ಸಾರುವುದನ್ನು ಕೇಳಿದ್ದೇನೆ.

ಪವಿತ್ರ ಕುರ್‌ಆನ್ ಮತ್ತು ಅಧಿಕೃತ ಹದೀಸ್‌ಗಳ ಹೊರತಾಗಿ ಉಲ್ಲೇಖಿಸಲ್ಪಡುವ ಧಾರ್ಮಿಕ ಕಥೆಗಳಲ್ಲಿ ಹೆಚ್ಚಿನವು "ಇಸ್ರಾಯಿಲಿಯತ್" (ಯಹೂದಿ, ನಸ್ರಾಣಿಗಳ ಮೂಲದಿಂದ ಬಂದವು) ನ ಸಾಲಿಗೆ ಸೇರಿರುತ್ತದೆ.

ಆದಮ್ ನಬಿ(ಅ) ಮತ್ತು ಹವ್ವಾ ಸ್ವರ್ಗದ ವೃಕ್ಷದಿಂದ ಹಣ್ಣು ತಿಂದ ನಂತರ ಭೂಮಿಗೆ ಬಂದ ಚರಿತ್ರೆಯನ್ನು ಪವಿತ್ರ ಕುರ್‌ಆನ್ ಹೀಗೆ ಪರಿಚಯಿಸುತ್ತದೆ. "ಶೈತಾನನು ಅವರನ್ನು ಅದರಿಂದ (ಸ್ವರ್ಗ) ದಾರಿ ತಪ್ಪಿಸಿದನು ಮತ್ತು ಅವರಿಬ್ಬರೂ ಯಾವ ಸ್ಥಳದಲ್ಲಿದ್ದರೋ ಅಲ್ಲಿಂದ ಹೊರಗಟ್ಟಿದನು. ನಾವು (ಅವರೊಂದಿಗೆ) ಹೇಳಿದೆವು: ನೀವು ಕೆಲವರು ಉಳಿದವರಿಗೆ ಶತ್ರುಗಳಾಗಿ ಇಲ್ಲಿಂದ ಇಳಿದು ಹೋಗಿರಿ, ನಿಶ್ಚಿತ ಕಾಲದ ವರೆಗೆ ಭೂಮಿಯಲ್ಲಿ ನಿಮಗೆ ವಾಸಸ್ಥಳ ಮತ್ತು ಜೀವನ ಸೌಕರ್ಯಗಳಿರುವುವು (2:36).

ಆದಮ್ ಮತ್ತು ಹವ್ವಾ ಭೂಮಿಯ ಯಾವ ಭಾಗದಲ್ಲಿ ಇಳಿದರು ಎಂಬುದರ ಕುರಿತು ಕುರ್‌ಆನ್ ಯಾವುದೇ ಸೂಚನೆ ಕೂಡಾ ನೀಡುವುದಿಲ್ಲ. ಮಾತ್ರವಲ್ಲ ಪ್ರವಾದಿ(ಸ)ರವರ ತನಕ ಪರಂಪರೆ ತಲುಪುವ ಯಾವುದೇ ಅಧಿಕೃತ ಹದೀಸ್‌ಗಳಲ್ಲಿ ಕೂಡಾ ಈ ಬಗ್ಗೆ ಸ್ಥಳ ನಿರ್ಣಯ ಮಾಡಿರುವುದಿಲ್ಲ.

ಆದರೆ ಕೆಲವು ದುರ್ಬಲ ವರದಿಗಳು ಚಾಲ್ತಿಯಲ್ಲಿದ್ದು ಈ ಐತಿಹ್ಯ ವ್ಯಾಪಕಗೊಳ್ಳಲು ಈ ವರದಿಗಳೇ ಮೂಲ ಕಾರಣವಾಗಿರಲೂಬಹುದು.

ಆದಮ್ ಭಾರತದಲ್ಲಿ ಬಂದಿಳಿದರು ಮತ್ತು ಒಂಟಿತನ ಅವರನ್ನು ಕಾಡಿತು (ಇಬ್ನ್ ಅಸಾಕಿರ್). ತಾರೀಖ್ ದಿಮಶ್ಕ್ ಎಂಬ ಗ್ರಂಥದಲ್ಲಿ (71437) ದಾಖಲಾಗಿರುವ ಈ ಹದೀಸ್ ದರ್ಬಲವೆಂದು ನಾಸಿರುದ್ದೀನ್ ಅಲ್ಬಾನಿ ತಮ್ಮ ಸಿಲ್ಸಿಲತುಲ್ ಅಹಾದೀಸಿದ್ದಈಫ(403)ದಲ್ಲಿ ವಿವರಿಸಿದ್ದಾರೆ.

ಆದಮ್ ನಬಿ ಭಾರತದಲ್ಲಿಳಿದ ಬಗ್ಗೆ ವರದಿಯಾಗಿರುವ ಇನ್ನೂ ಕೆಲವು ಹದೀಸ್‌ಗಳಿದ್ದು ಅವೆಲ್ಲದರ ಪರಂಪರೆ ದುರ್ಬಲವಾಗಿದೆ.

ಈ ಕುರಿತು ಕೆಲವು ಪೂರ್ವಿಕ ವಿದ್ವಾಂಸರ ನುಡಿಗಳನ್ನೂ ಉದ್ಧರಿಸಲಾಗುತ್ತದೆ. ಆದಮ್, ಹವ್ವಾ ಇಬ್ಬರೂ ಭಾರತದಲ್ಲಿ ಬಂದಿಳಿದರು ಎಂದು ಕೆಲವರು ಹೇಳಿದರೆ ಮತ್ತೆ ಕೆಲವರು ಆದಮ್ ಸಫಾದಲ್ಲೂ ಹವ್ವಾ ಮರ್‌ವಾದಲ್ಲೂ ಬಂದಿಳಿದರು ಎಂದು ಅಭಿಪ್ರಾಯ ಪಡುತ್ತಾರೆ. ಆದರೆ ಇವುಗಳಿಗೆ ಯಾವುದೇ ಪುರಾವೆ ಇಲ್ಲ. ಮಾತ್ರವಲ್ಲ ಇಂತಹ ಚರ್ಚೆಯಿಂದ ನಮಗೆ ಇಹ-ಪರವಾದ ಯಾವುದೇ ಪ್ರಯೋಜನವೂ ಇಲ್ಲ.

ಇಂತಹ ಅನಗತ್ಯ ಚರ್ಚೆ ಕುರ್‌ಆನ್ ಬಹಿರಂಗಗೊಳಿಸದ ಇನ್ನೂ ಎಷ್ಟೋ ವಿಚಾರಗಳ ಕುರಿತು ನಡೆದಿದೆ. ಶೈಖ್ ಅಹ್ಮದ್ ಶಾಕಿರ್ (ರ) ಎಂಬ ಆಧುನಿಕ ಸಲಫಿ ವಿದ್ವಾಂಸ ಇಬ್ನು ಕಸೀರ್ ಅವರ ಕುರ್‌ಆನ್ ವ್ಯಾಖ್ಯಾನ (ತಫ್‌ಸೀರ್) ಗ್ರಂಥವನ್ನು ಸಂಕ್ಷೇಪಗೊಳಿಸಿ ಬರೆದ "ಉಮ್‌ದತುತಫ್‌ಸೀರ್" ಎಂಬ ಗ್ರಂಥದಲ್ಲಿ ಇಸ್ರೇಲೀ ವರದಿಗಳ ವಿಶ್ಲೇಷಣೆ ಮಾಡಿದ್ದಾರೆ.

ಅಸ್‌ಹಾಬುಲ್ ಕಹ್‌ಫ್‌ನವರ ಹೆಸರಿನ ಕುರಿತ ಚರ್ಚೆ. ಅವರ ಸಂಖ್ಯೆ ಮತ್ತು ಅವರೊಂದಿಗಿದ್ದ ನಾಯಿಯ ಬಣ್ಣ, ಮೂಸಾ ನಬಿ(ಅ)ರವರ ಕೋಲು ಯಾವ ವೃಕ್ಷದ್ದು ಎಂಬ ಬಗ್ಗೆ, ಇಬ್ರಾಹೀಮ್ ನಬಿ(ಅ)ರವರಿಗೆ ದೃಷ್ಟಾಂತವಾಗಿ ಅಲ್ಲಾಹು ಪುನರ್ಜೀವಗೊಳಿಸಿದ ಹಕ್ಕಿಗಳ ಹೆಸರು, ಅಲ್ಲಾಹು ಮೂಸಾ(ಅ)ರವರ ಜತೆ ಮಾತನಾಡಿದ ಮರದ ಜಾತಿ, ಹೀಗೆ ಅಲ್ಲಾಹು ಸ್ಪಷ್ಟವಾಗಿ ವಿವರಿಸದೆ ಬಿಟ್ಟಿರುವ ಹಲವಾರು ವಿಷಯಗಳ ಕುರಿತು ಏನೇನೋ ಅಭಿಪ್ರಾಯ ಪ್ರಕಟಿಸಿದವರಿದ್ದಾರೆ. ಇವುಗಳನ್ನು ತಿಳಿಯುವುದರಿಂದ ನಮಗೇನಾದರೂ ಪ್ರಯೋಜನವಿರುತ್ತಿದ್ದರೆ ಅಲ್ಲಾಹು ಅಥವಾ ಅವನ ಸಂದೇಶವಾಹಕರು ಖಂಡಿತವಾಗಿಯೂ ವಿವರಿಸಿ ಕೊಡುತ್ತಿದ್ದರು.

ಶ್ರೀಲಂಕಾದಲ್ಲಿರುವ Adam's Peak ಎಂಬ ಪರ್ವತ ಶಿಖರ, ಅತ್ತ ಹಿಂದೂ ಬಾಂಧವರೂ ಪೂಜ್ಯವಾಗಿ ಕಾಣುವ "ಶ್ರೀಪಾದ" ಎಂಬ ತೀರ್ಥ ಸ್ಥಳ ಇವೆಲ್ಲವೂ ಇದೆಯೆಂಬ ಕಾರಣಕ್ಕಾಗಿ ಶ್ರೀಲಂಕಾ ಸಂದರ್ಶಿಸುವವರಿದ್ದಾರೆ.

ಆದಮ್ ನಬಿ(ಅ)ರವರ ಪಾದ ಮುದ್ರೆ ಇದೆ ಎನ್ನಲಾಗುವ ಶಿಲೆಯ ಹಿನ್ನೆಲೆ ಏನೆಂದರೆ ಆದಮ್ ನಬಿ ನಿಷೇಧಿತ ವೃಕ್ಷದಿಂದ ತಿಂದುದಕ್ಕಾಗಿ ಪ್ರಾಯಶ್ಚಿತ್ತವಾಗಿ 1000 ವರ್ಷಗಳ ಕಾಲ ಆ ಶಿಲೆಯ ಮೇಲೆ ಏಕ ಪಾದವೂರಿ ನಿಂತರಂತೆ!... ಮಆದಲ್ಲಾಹ್... ಎಂತಹ ಕಟ್ಟು ಕಥೆ! ತಾನು ಮಾಡಿದ ತಪ್ಪಿಗೆ ಆದಮ್ (ಅ)ರವರು ಅಲ್ಲಾಹನಲ್ಲಿ ಪ್ರಾರ್ಥಿಸಿದಾಗ ಅಲ್ಲಾಹು ಅವರ "ತೌಬಾ"ವನ್ನು ಸ್ವೀಕರಿಸಿದ ಬಗ್ಗೆ ಪವಿತ್ರ ಕುರ್‌ಆನ್ ಸ್ಪಷ್ಟಪಡಿಸಿರುವಾಗ ಇಸ್ಲಾಮಿಗೆ ಅನ್ಯವಾಗಿರುವ ಇಂತಹ ಖುರಾಫಾತ್‌ಗಳ ಬಗ್ಗೆ ಸತ್ಯವಿಶ್ವಾಸಿಗಳು ಜಾಗೃತರಾಗಬೇಕಿದೆ.

# ಧರ್ಮನಿಷ್ಠ ಖಲೀಫರು

(4ನೇ ಪುಟದಿಂದ)

ಆದರೆ ಅಬೂಬಕರ್(ರ) ಹಿಂಜರಿದರು. ಉಮರ್(ರ) ಮತ್ತು ಝೈದ್ ಬಿನ್ ಸಾಬಿತ್ (ರ)ರವರು ಅಬೂ ಬಕರ್(ರ)ರವರ ಕೈಹಿಡಿದು ಬೈಅತ್ ಮಾಡಿದರು. ಬಳಿಕ ಅಬೂ ಉಬೈದ ಬಿನ್ ಅಲ್ ಜರ್ರಾಹ್ ಮತ್ತು ಬಶೀರ್ ಬಿನ್ ಅನ್ನುಅ್‌ಮಾನ್ ಅನ್ಸಾರಿಯವರು ಬೈಅತ್ ಮಾಡಿದರು. ಅದನ್ನು ಕಂಡು ಎಲ್ಲರೂ ಬಂದು ಬೈಅತ್ ಮಾಡಿದರು. ಹೀಗೆ ಪ್ರವಾದಿ(ಸ)ರ ಮೊದಲ ಉತ್ತರಾಧಿಕಾರಿಯಾಗಿ ಅಬೂಬಕರ್ (ರ) ಆಯ್ಕೆಯಾದರು.

ಇಸ್ಲಾಮಿನ ಇತಿಹಾಸದಲ್ಲಿ ಭಾರೀ ಮಹತ್ವದ ಹುದ್ದೆಯನ್ನು ಅಲಂಕರಿಸಿದ ಅಬೂಬಕರ್(ರ)ರವರು ಎಲ್ಲರ ಬೈಅತನ್ನು ಸ್ವೀಕರಿಸಿದ ಬಳಿಕ ಮಸೀದಿಯಲ್ಲಿ ತನ್ನ ಮೊದಲ ಉಪದೇಶ ಮಾಡಿದರು: "ಓ ಜನರೇ, ನಾನು ನಿಮ್ಮ ನಿಕ್ಷೇಪಧಾರಿಯಾಗಿ ಆಯ್ಕೆಯಾಗಿದ್ದೇನೆ. ಆದರೆ ನಾನು ನಿಮ್ಮಲ್ಲಿ ಯಾರಿಗಿಂತಲೂ ಉತ್ತಮನಲ್ಲ. ನಾನು ಸರಿಯಾಗಿ ನನ್ನ ಜವಾಬ್ದಾರಿಯನ್ನು ನಿರ್ವಹಿಸುತ್ತಿದ್ದರೆ ನನ್ನನ್ನು ಅನುಸರಿಸಿ, ಇಲ್ಲದಿದ್ದರೆ ನನ್ನನ್ನು ತಿರಸ್ಕರಿಸಿ. ಸತ್ಯವು ಪ್ರಾಮಾಣಿಕವಾಗಿದೆ. ಅಸತ್ಯವು ಅಪ್ರಾಮಾಣಿಕವಾಗಿದೆ. ಬಲಾಢ್ಯನು ಎಷ್ಟರ ತನಕ ತನ್ನ ಅರ್ಹತೆಯನ್ನು ಇತರರಿಗೆ ವಹಿಸಿ ಕೊಡುವುದಿಲ್ಲವೋ ಅಲ್ಲಿಯ ತನಕ ಅವನು ನನ್ನ ದೃಷ್ಟಿಯಲ್ಲಿ ಬಲಹೀನನು. ಅಲ್ಲಾಹನ ಮಾರ್ಗದಲ್ಲಿರುವ ಜಿಹಾದನ್ನು ಯಾರು ತ್ಯಜಿಸುತ್ತಾರೋ ಅವರ ಮೇಲೆ ಅಲ್ಲಾಹನ ಕಡೆಯಿಂದ ಅಪಮಾನ ಬಂದೆರಗಲಿದೆ. ಕೆಡುಕಿನ ಮೂಲಕ ತೃಪ್ತಿ ಪಡುವವರ ಮೇಲೆ ಅಲ್ಲಾಹು ವಿನಾಶವನ್ನು ಕಳುಹಿಸುವನು. ನಿಮ್ಮೊಂದಿಗೆ ನಾನು ವಿನಂತಿಸುವುದೇನೆಂದರೆ ಅಲ್ಲಾಹು ಮತ್ತು ಪ್ರವಾದಿ(ಸ)ರಿಗೆ ಎಷ್ಟರ ತನಕ ನಾನು ವಿಧೇಯನಾಗಿರುತ್ತೇನೋ ಅಷ್ಟರ ತನಕ ನೀವು ನನಗೆ ವಿಧೇಯರಾಗಿರಿ. ನಾನು ಅಲ್ಲಾಹು ಮತ್ತು ಪ್ರವಾದಿ(ಸ)ರೊಂದಿಗೆ ಅವಿಧೇಯತೆ ತೋರಿಸಿದರೆ ನೀವೂ ನನ್ನೊಂದಿಗೆ ಅವಿಧೇಯತೆ ತೋರಿಸಿರಿ".

ಇಸ್ಲಾಮೀ ಆಡಳಿತ ವ್ಯವಸ್ಥೆಯಲ್ಲಿ ಒಬ್ಬ ಮಾದರಿ ಖಲೀಫರ ಪಾತ್ರವೇನೆಂಬುದನ್ನು ಅಬೂಬಕರ್(ರ) ತನ್ನ ಚೊಚ್ಚಲ ಭಾಷಣದಲ್ಲಿ ಸೂಚ್ಯವಾಗಿ ವಿವರಿಸಿದರು. ಇಸ್ಲಾಮಿಕ್ ಗವರ್ನ್‌ಮೆಂಟ್ ಎಂದರೆ ಜನರ ಇಹಪರಗಳ ಹಿತಕ್ಕಾಗಿ ಅಲ್ಲಾಹು ಮತ್ತು ರಸೂಲ್(ಸ)ರ ಆಡಳಿತ ವ್ಯವಸ್ಥೆಯನ್ನು ಅನುಷ್ಠಾನಗೊಳಿಸುವ ಅವನ ಸೇವಕರು ಎಂಬುದರಲ್ಲಿ ಸಂದೇಹವಿಲ್ಲ. 33 ಸಾವಿರ ಮಂದಿ ಬೈಅತ್ ಮಾಡಿದ ಅಬೂಬಕರ್(ರ)ರವರ ಆಯ್ಕೆಯು ಮುಸ್ಲಿಮ್ ಸಮುದಾಯ (ಉಮ್ಮತೇ ಮುಸ್ಲಿಮ್)ದ ನಾಯಕನನ್ನು ಆರಿಸುವ ಇಸ್ಲಾಮೀ ಪ್ರಜಾಪ್ರಭುತ್ವ ವ್ಯವಸ್ಥೆಯ ಒಂದು ನಿದರ್ಶನವಾಗಿತ್ತು.

(ಮುಂದುವರಿಯುವುದು)

## ಓದುಗರ ಗಮನಕ್ಕೆ

**ಪವಿತ್ರ ಸಂದೇಶ ಪತ್ರಿಕೆಗೆ ಚಂದಾದಾರರಾಗಲು, ಚಂದಾ ನವೀಕರಿಸಲು ಮತ್ತು ಪತ್ರಿಕೆ ಸರಿಯಾಗಿ ತಲುಪದಿದ್ದರೆ ಈ ಕೆಳಗಿನ ನಂಬರ್‌ನಲ್ಲಿ ಸಂಪರ್ಕಿಸಿರಿ:**

**9482946133**

# ಅಧ್ಯಾಯ - 3 ಆಲ್ ಇಮ್ರಾನ್

ಒಟ್ಟು ಸೂಕ್ತಗಳು: 200 | ಮುಹಮ್ಮದ್ ಅಮಾನಿ ಮೌಲವಿ | ಪ್ರಕಟಿತ ಸೂಕ್ತಗಳು: 78, 79, 80, 81

78 وَاِنَّ مِنْهُمْ لَفَرِيْقًا يَّلْوٗنَ اَلْسِنَتَهُمْ بِالْكِتٰبِ لِتَحْسَبُوْهُ مِنَ الْكِتٰبِ وَمَا هُوَ مِنَ الْكِتٰبِ ۚ وَيَقُوْلُوْنَ هُوَ مِنْ عِنْدِ اللّٰهِ وَمَا هُوَ مِنْ عِنْدِ اللّٰهِ ۚ وَيَقُوْلُوْنَ عَلَى اللّٰهِ الْكَذِبَ وَهُمْ يَعْلَمُوْنَ ﴿٧٨﴾

79 مَا كَانَ لِبَشَرٍ اَنْ يُّؤْتِيَهُ اللّٰهُ الْكِتٰبَ وَالْحُكْمَ وَالنُّبُوَّةَ ثُمَّ يَقُوْلَ لِلنَّاسِ كُوْنُوْا عِبَادًا لِّيْ مِنْ دُوْنِ اللّٰهِ وَلٰكِنْ كُوْنُوْا رَبّٰنِيّٖنَ بِمَا كُنْتُمْ تُعَلِّمُوْنَ الْكِتٰبَ وَبِمَا كُنْتُمْ تَدْرُسُوْنَ ﴿٧٩﴾

80 وَلَا يَاْمُرَكُمْ اَنْ تَتَّخِذُوا الْمَلٰٓئِكَةَ وَالنَّبِيّٖنَ اَرْبَابًا ؕ اَيَاْمُرُكُمْ بِالْكُفْرِ بَعْدَ اِذْ اَنْتُمْ مُّسْلِمُوْنَ ﴿٨٠﴾

81 وَاِذْ اَخَذَ اللّٰهُ مِيْثَاقَ النَّبِيّٖنَ لَمَآ اٰتَيْتُكُمْ مِّنْ كِتٰبٍ وَّحِكْمَةٍ ثُمَّ جَآءَكُمْ رَسُوْلٌ مُّصَدِّقٌ لِّمَا مَعَكُمْ لَتُؤْمِنُنَّ بِهٖ وَلَتَنْصُرُنَّهٗ ؕ قَالَ ءَاَقْرَرْتُمْ وَاَخَذْتُمْ عَلٰى ذٰلِكُمْ اِصْرِيْ ؕ قَالُوْٓا اَقْرَرْنَا ؕ قَالَ فَاشْهَدُوْا
وَاَنَا مَعَكُمْ مِّنَ الشّٰهِدِيْنَ ﴿٨١﴾

| | | | | | | | |
|---|---|---|---|---|---|---|---|
| 78 | | | | | | | |
| ನೀವು ಅದನ್ನು ಭಾವಿಸಲಿಕ್ಕಾಗಿ لِتَحْسَبُوْهُ | ಗ್ರಂಥದಲ್ಲಿ بِالْكِتٰبِ | ಅವರ ನಾಲಗೆಗಳನ್ನು اَلْسِنَتَهُمْ | ಅವರು ಸುರುಟುವವರು يَلْوٗنَ | ಒಂದು ಪಂಗಡ لَفَرِيْقًا | ನಿಶ್ಚಯವಾಗಿಯೂ ಅವರಲ್ಲಿದೆ وَاِنَّ مِنْهُمْ | | |
| ಅಲ್ಲಾಹನ ವತಿಯದ್ದಾಗಿದೆ(ಯೆಂದು) مِنْ عِنْدِ اللّٰهِ | ಅದು هُوَ | ಮತ್ತು ಅವರು ಹೇಳುವರು وَيَقُوْلُوْنَ | ಗ್ರಂಥದಲ್ಲಿ ಸೇರಿದ್ದು مِنَ الْكِتٰبِ | ಅದಲ್ಲ وَمَا هُوَ | ಗ್ರಂಥದಲ್ಲಿ ಸೇರಿದ್ದೆಂದು مِنَ الْكِتٰبِ | | |
| ಅವರು ಅರಿತಿರುತ್ತ وَهُمْ يَعْلَمُوْنَ | ಸುಳ್ಳು الْكَذِبَ | ಅಲ್ಲಾಹನ ಹೆಸರಲ್ಲಿ عَلَى اللّٰهِ | ಮತ್ತು ಅವರು ಹೇಳುವರು وَيَقُوْلُوْنَ | ಅಲ್ಲಾಹನ ವತಿಯದ್ದು مِنْ عِنْدِ اللّٰهِ | ಆದರೆ ಅದಲ್ಲ وَمَا هُوَ | | |
| 79 | | | | | | | |
| ಮತ್ತು ಪ್ರವಾದಿತ್ವವನ್ನು وَالنُّبُوَّةَ | ಮತ್ತು ಜ್ಞಾನವನ್ನು وَالْحُكْمَ | ಗ್ರಂಥವನ್ನು الْكِتٰبَ | ಅಲ್ಲಾಹು اللّٰهُ | ಅವನಿಗೆ ನೀಡುವುದು اَنْ يُّؤْتِيَهُ | ಯಾವ ಮನುಷ್ಯನಿಗೂ لِبَشَرٍ | ಉಂಟಾಗದು مَا كَانَ | |
| ಆದರೂ (ಅವನು ಹೇಳುವನು) وَلٰكِنْ | ಅಲ್ಲಾಹನನ್ನು ಬಿಟ್ಟು مِنْ دُوْنِ اللّٰهِ | ನನಗೆ(ನನ್ನ) ದಾಸರು عِبَادًا لِّيْ | ನೀವಾಗಿರಿ كُوْنُوْا | ಜನರೊಡನೆ لِلنَّاسِ | ಆ ಬಳಿಕ ಅವನು ಹೇಳುವುದು ثُمَّ يَقُوْلَ | | |
| ಮತ್ತು ನೀವಾಗಿರುವುದರಿಂದ وَبِمَا كُنْتُمْ | ಗ್ರಂಥವನ್ನು الْكِتٰبَ | ನೀನು ಕಲಿಸುತ್ತಿದ್ದೀರಿ تُعَلِّمُوْنَ | ನೀವಾಗಿರುವುದರಿಂದ بِمَا كُنْتُمْ | ಧರ್ಮೋಪದೇಶಕರು رَبّٰنِيّٖنَ | ನೀವಾಗಿರಿ كُوْنُوْا | | |
| | ಕಲಿಯುತ್ತಿದ್ದೀರಿ تَدْرُسُوْنَ | | | | | | |
| 80 | | | | | | | |
| ಪ್ರಭುಗಳಾಗಿ اَرْبَابًا | ಮತ್ತು ಪ್ರವಾದಿಗಳನ್ನು وَالنَّبِيّٖنَ | ಮಲಕ್‌ಗಳನ್ನು الْمَلٰٓئِكَةَ | ನೀವು ಸ್ವೀಕರಿಸಲಿಕ್ಕಾಗಿ اَنْ تَتَّخِذُوا | ಮತ್ತು ಅವರು ನಿಮ್ಮೊಂದಿಗೆ ಆದೇಶಿಸಲಾರರು وَلَا يَاْمُرَكُمْ | | | |
| | ಮುಸ್ಲಿಮರು (ಶರಣಾಗತರಾದವರು) مُّسْلِمُوْنَ | ನೀವು ಆದ ಬಳಿಕ بَعْدَ اِذْ اَنْتُمْ | ಸತ್ಯ ನಿಷೇಧಕ್ಕೆ بِالْكُفْرِ | ಅವರು ನಿಮ್ಮೊಡನೆ ಆದೇಶಿಸುವುದೇ? اَيَاْمُرُكُمْ | | | |
| 81 | | | | | | | |
| ಗ್ರಂಥವಾಗಿ مِّنْ كِتٰبٍ | ನಿಶ್ಚಯವಾಗಿ ನಾನು ನಿಮಗೆ ಏನನ್ನಾದರೂ ನೀಡಿದರೆ لَمَآ اٰتَيْتُكُمْ | ಪ್ರವಾದಿಗಳ النَّبِيّٖنَ | ಕರಾರನ್ನು مِيْثَاقَ | ಅಲ್ಲಾಹು اللّٰهُ | ಪಡೆದ ಸಂದರ್ಭ وَاِذْ اَخَذَ | | |
| ನಿಮ್ಮ ಬಳಿಯಿರುವುದನ್ನು لِّمَا مَعَكُمْ | ಸತ್ಯವೆಂಬ مُّصَدِّقٌ | ಯಾರಾದರೂ ಸಂದೇಶವಾಹಕರು رَسُوْلٌ | ಬಳಿಕ ನಿಮಗೆ ಬಂದರು ثُمَّ جَآءَكُمْ | ಮತ್ತು ಜ್ಞಾನವಾಗಿ وَّحِكْمَةٍ | | | |
| ನನ್ನ ಕರಾರನ್ನು اِصْرِيْ | ಆ ಬಗ್ಗೆ عَلٰى ذٰلِكُمْ | ಮತ್ತು ನೀವು ಸ್ವೀಕರಿಸಿದಿರಿ وَاَخَذْتُمْ | ನೀವು ಸಮ್ಮತಿಸಿದಿರಾ? ءَاَقْرَرْتُمْ | ಅವನು ಹೇಳಿದನು قَالَ | ಮತ್ತು ಅವರಿಗೆ ಖಂಡಿತ ಸಹಾಯ ಮಾಡುವಿರಿ وَلَتَنْصُرُنَّهٗ | ಖಂಡಿತವಾಗಿಯೂ ಅವರಲ್ಲಿ ನೀವು ವಿಶ್ವಾಸವಿಡುತ್ತೀರಿ لَتُؤْمِنُنَّ بِهٖ | |
| ಸಾಕ್ಷಿಗಳಲ್ಲಿ ಸೇರಿದವನಾಗಿದ್ದೇನೆ مِّنَ الشّٰهِدِيْنَ | ನಾನೂ ನಿಮ್ಮೊಂದಿಗೆ وَاَنَا مَعَكُمْ | ಹಾಗಾದರೆ ಸಾಕ್ಷ್ಯ ವಹಿಸಿರಿ فَاشْهَدُوْا | ಅವನು ಹೇಳಿದನು قَالَ | ನಾವು ಸಮ್ಮತಿಸಿದೆವು اَقْرَرْنَا | ಅವರು ಹೇಳಿದರು قَالُوْٓا | | |

78. ನಿಶ್ಚಯವಾಗಿಯೂ ಗ್ರಂಥದ(ಪಾರಾಯಣದ)ಲ್ಲಿ ತಮ್ಮ ನಾಲಗೆಗಳನ್ನು ಸುರುಟುವ ಇನ್ನೊಂದು ಪಂಗಡ ಅವರಲ್ಲೇ ಇದೆ. ಅದು ಗ್ರಂಥದಲ್ಲಿ ಒಳಗೊಂಡದ್ದೆಂದು ನೀವು ಭಾವಿಸಲಿಕ್ಕಾಗಿ (ಅವರು ಹಾಗೆ ಮಾಡುತ್ತಾರೆ). ಆದರೆ ಅದು ಗ್ರಂಥದಲ್ಲಿ ಒಳಗೊಂಡದ್ದಲ್ಲ. ಅದು ಅಲ್ಲಾಹನ ವತಿಯದ್ದಾಗಿದೆ ಎಂದು ಅವರು ಹೇಳುತ್ತಾರೆ. ಆದರೆ ಅದು ಅಲ್ಲಾಹನ ವತಿಯದ್ದಾಗಿರುವುದಿಲ್ಲ. ಅವರು ಅರಿತಿರುತ್ತ ಅಲ್ಲಾಹನ ಹೆಸರಲ್ಲಿ ಸುಳ್ಳು ಹೇಳುತ್ತಾರೆ.

79. ಅಲ್ಲಾಹು ಒಬ್ಬರಿಗೆ ಗ್ರಂಥವನ್ನೂ ಜ್ಞಾನವನ್ನೂ ಪ್ರವಾದಿತ್ವವನ್ನೂ ನೀಡುವುದು, ಅನಂತರ ಅವನು ಜನರೊಡನೆ ನೀವು ಅಲ್ಲಾಹನನ್ನು ಬಿಟ್ಟು ನನ್ನ ಪೂಜಕರಾಗಿರಿ ಎಂದು ಹೇಳುವುದು (ಇವೆರಡೂ ಎಂದಿಗೂ) ಉಂಟಾಗಲಾರದು. ಆದರೆ (ಅವನು ಹೇಳುವುದು) "ನೀವು ಗ್ರಂಥವನ್ನು ಕಲಿಸುತ್ತಿರುವುದರಿಂದ ಮತ್ತು ನೀವು ಕಲಿಯುತ್ತಿರುವುದರಿಂದ ನೀವು ಧರ್ಮೋಪದೇಶಕರಾಗಿರಿ" ಎಂದಾಗಿದೆ.

80. ಮತ್ತು ಮಲಕ್‌ಗಳನ್ನೂ ಪ್ರವಾದಿಗಳನ್ನೂ ಪ್ರಭುಗಳಾಗಿ ಸ್ವೀಕರಿಸಲು ಅವನು ನಿಮ್ಮೊಡನೆ ಆದೇಶಿಸಲಾರನು. ನೀವು ಅಲ್ಲಾಹನಿಗೆ ಶರಣಾಗತರಾದ ಮೇಲೆ (ಮುಸ್ಲಿಮರಾದ ಮೇಲೆ) ಅವನು ನಿಮ್ಮೊಡನೆ ಸತ್ಯನಿಷೇಧಕ್ಕೆ ಆದೇಶಿಸುವುದೇ?

81. ನಾನು ನಿಮಗೆ ಗ್ರಂಥವಾಗಿ ಮತ್ತು ಜ್ಞಾನವಾಗಿ ಏನನ್ನಾದರೂ ನೀಡಿದ ಬಳಿಕ ನಿಮ್ಮಲ್ಲಿರುವುದನ್ನು (ಗ್ರಂಥವನ್ನು) ಧೃಢೀಕರಿಸುವ ಓರ್ವ ಸಂದೇಶವಾಹಕರು ನಿಮ್ಮ ಬಳಿಗೆ ಬಂದರೆ ನೀವು ಖಂಡಿತವಾಗಿಯೂ ಅವರಲ್ಲಿ ವಿಶ್ವಾಸವಿಡಬೇಕು ಮತ್ತು ಅವರಿಗೆ ಸಹಾಯ ಮಾಡಬೇಕು ಎಂದು ಅಲ್ಲಾಹು ಪ್ರವಾದಿಗಳ ಕರಾರು ಪಡೆದ ಸಂದರ್ಭ (ವನ್ನು ಸ್ಮರಿಸಿರಿ). ಅವನು (ಅವರೊಡನೆ) "ನೀವು ಸಮ್ಮತಿಸಿದಿರಾ ಮತ್ತು ಆ ಬಗ್ಗೆ ನನ್ನ ಕರಾರಿನ ಹೊಣೆಗಾರಿಕೆ(ನನ್ನೊಂದಿಗೆ ಮಾಡಿದ ನನ್ನ ಕರಾರಿನ ಹೊಣೆಗಾರಿಕೆ)ಯನ್ನು ವಹಿಸಿದಿರಾ?" ಎಂದು ಕೇಳಿದನು. (ಆಗ) ಅವರು "ನಾವು ಸಮ್ಮತಿಸಿದೆವು" ಎಂದರು. ಅವನು ಹೇಳಿದನು: "ಹಾಗಾದರೆ ಅದಕ್ಕೆ ನೀವು ಸಾಕ್ಷ್ಯ ವಹಿಸಿರಿ ಮತ್ತು ನಿಮ್ಮೊಂದಿಗೆ ನಾನೂ ಸಾಕ್ಷಿಗಳಲ್ಲಿ ಸೇರಿದವನಾಗಿದ್ದೇನೆ."

Name & Address:

**PAVITHRA SANDESHA**
*Kannada Fortnightly*
Polymer House, 2nd Floor, Nellikai Road, Mangalore - 575 001

Regd. With RNI No.: 63987/96
Postal Regd. No. KA/SK/MNG/160/2012-2014
Licence to Post without prepayment.
WPP/SK/MNG-104/2012-2014
Posted at Head Post Office, Mangalore.
Posting Date: 13th & 28th of Every Month
Publication Date: 10th & 25th of Every Month



# ವಾಟ್ಸಪ್ ಸಂದೇಶ ಕಾಲಂ

يا أيها الذين آمنوا استعينوا بالصبر والصلاة إن الله مع الصابرين

ಓ ಸತ್ಯವಿಶ್ವಾಸಿಗಳೇ,
ನೀವು **ಸಹನೆ**
ಹಾಗೂ **ನಮಾಝ್**ನ
ಮೂಲಕ ಸಹಾಯ ಬೇಡಿಕೊಳ್ಳಿರಿ.
ನಿಶ್ಚಯವಾಗಿಯೂ ಅಲ್ಲಾಹು
ಸಹನಶೀಲರೊಂದಿಗಿರುವನು.

(ಕುರ್‌ಆನ್ 2x153)

ಇಹಲೋಕವು
ಸತ್ಯವಿಶ್ವಾಸಿಗಳ
**ಬಂಧೀಖಾನೆಯಾಗಿದೆ**
ಮತ್ತು
ಸತ್ಯನಿಷೇಧಿಗಳ
**ಸ್ವರ್ಗವಾಗಿದೆ**
[ಪ್ರವಾದಿ ಮುಹಮ್ಮದ್(ಸ)]

## ಹಣ ಮತ್ತು ಈಮಾನ್ ಎರಡೂ ನಷ್ಟ



ಸಹೋದರರೇ, ನೀವು ನೀವು ಪೈಪ್ರೋಟಿ ನಡೆಸಿ ಹಣವನ್ನು ನೀಡಿ 786, 313 ನಂಬ್ರಗಳು ಪಡೆಯುವುದರಲ್ಲಿ ಯಾವುದೇ ಲಾಭ ವಿಲ್ಲ. ಆ ಹಣವನ್ನು R.T.O.ಗೆ ಕೊಡದೆ ಬಡವರಿಗೆ ಸಹಾಯ ಮಾಡಿರಿ. ಅವರ ದುಆ ಇದ್ದರೆ ಅಲ್ಲಾಹು ನಿಮ್ಮನ್ನು ರಕ್ಷಿಸು ವನು. ಇದು ಯಾವುದೂ ಇಸ್ಲಾಮ್ ಅಲ್ಲ. ಈ ನಂಬ್ರಗಳು ನಮ್ಮ ವಾಹನ ಮತ್ತು ಜೀವನವನ್ನು ರಕ್ಷಿಸುತ್ತದೆ ಎಂದು ವಿಶ್ವಾಸವಿಟ್ಟರೆ ಅದು ಮಹಾ ಪಾಪಗಳ ಪಟ್ಟಿಯನ್ನು ಸೇರುತ್ತದೆ. ಸತ್ಕರ್ಮ, ತೌಬಾ, ದುಆ ಇವುಗಳಿಂದ ಮಾತ್ರ ಅಲ್ಲಾಹನ ಸಹಾಯ ಸಿಗುವುದು.

واخفض لهما جناح الذل من الرحمة وقل رب ارحمهما كما ربياني صغيرا

ಅವರಿಗೆ (ಮಾತಾಪಿತರಿಗೆ) ಕರುಣೆಯಿಂದ ವಿನಯದ ರೆಕ್ಕೆಗಳನ್ನು ಇಳಿಸಿ ಕೊಡಿರಿ ಮತ್ತು ನೀವು "ಪ್ರಭೂ, ಅವರಿಬ್ಬರೂ ನನ್ನನ್ನು ಚಿಕ್ಕಂದಿನಲ್ಲಿ (ಪರಿಪಾಲಿಸಿ) ಪೋಷಿಸಿದಂತೆಯೇ ನೀನು ಅವರೊಡನೆ ಕೃಪೆ ತೋರು" ಎಂದು ಪ್ರಾರ್ಥಿಸಿರಿ.

(ಕುರ್‌ಆನ್ 17x24)

## ಏಳು ಅದ್ಭುತಗಳು

1. ಮರಣವೆಂಬ ವಾಸ್ತವಿಕತೆಯನ್ನು ಅರಿತೂ ಐಹಿಕ ಲೋಕದ ಆಟ ವಿನೋದಗಳಲ್ಲಿ ಮೈಮರೆತವನ ವಿಷಯವು ಅದ್ಭುತವೆ.
2. ಇಹಲೋಕ ಶಾಶ್ವತವಲ್ಲವೆಂಬುದನ್ನರಿತೂ ಅದರಲ್ಲಿರುವ ಸುಖಭೋಗ ವಸ್ತುಗಳ ಹಿಂದೆ ಓಡುವವನ ವಿಷಯವು ಅದ್ಭುತವೆ.
3. ದೇವನ ವಿಚಾರಣೆ ಇದೆ ಎಂಬುದನ್ನರಿತೂ ನಿಷಿದ್ಧ ರೀತಿಯಲ್ಲಿ ಧನ ಸಂಪಾದಿಸುವವನ ವಿಷಯವು ಅದ್ಭುತವೆ.
4. ನರಕ ಶಿಕ್ಷೆಯು ಸತ್ಯವೆಂಬುದನ್ನರಿತೂ ಪಾಪ ಮಾಡುವವನ ವಿಷಯವು ಅದ್ಭುತವೆ.
5. ಎಂಬ ಕಾರ್ಯವು ದೇವನ ಇಚ್ಛೆಯನುಸಾರ ವೆಂಬುದನ್ನರಿತೂ ನಷ್ಟ ಉಂಟಾಗುವಾಗ ಖೇದ ಪ್ರಕಟಿಸುವವನ ವಿಷಯವು ಅದ್ಭುತವೆ.
6. ಸ್ವರ್ಗ ಸುಖಃ ಸತ್ಯವೆಂಬುದನ್ನರಿತೂ ಇಹಲೋಕ ಸುಖವನ್ನರಸುವವನ ವಿಷಯವು ಅದ್ಭುತವೆ.
7. ಶೈತಾನನು ತನ್ನ ಶತ್ರುವಾಗಿದ್ದಾನೆಂಬುದನ್ನರಿತೂ ಅವನನ್ನು ಮಿತ್ರನನ್ನಾಗಿಸುವವನ ವಿಷಯವು ಅದ್ಭುತವೆ.

قال بعض السلف
من خاف الله
خافه كل شيء
ومن لم يخف الله
أخافه من كل شيء

ಅಲ್ಲಾಹನನ್ನು ಭಯಪಟ್ಟು ಜೀವಿಸುವವನಿಗೆ ಯಾವುದನ್ನೂ ಹೆದರುವ ಅಗತ್ಯವಿಲ್ಲ. ಅಲ್ಲಾಹನನ್ನು ಭಯ ಪಡದೆ ಜೀವಿಸುವವನು ಎಲ್ಲವನ್ನೂ ಭಯಪಡು ವನು. (ಇಬ್‌ನುಲ್‌ಖಯ್ಯೂಮ್)

## ಪ್ರವಾದಿ(ಸ)ರವರು ಹೇಳಿದ್ದಾರೆ:

ಮೂರು ಮಸೀದಿಗಳಿಗಲ್ಲದೆ ಪುಣ್ಯ ಬಯಸಿ ಯಾತ್ರೆ ಹೊರಡದಿರಿ.

1. ಮಸ್ಜಿದ್-ಎ-ಹರಮ್(ಮಕ್ಕಾ)
2. ಮಸ್ಜಿದ್-ಎ- ನಬವಿ (ಮದೀನಾ)
3. ಮಸ್ಜಿದ್-ಎ-ಅಕ್ಸಾ (ಬೈತುಲ್‌ಮುಖದ್ದಿಸ್) (ಬುಖಾರಿ)

(ಬುಖಾರಿ)

ಅಜ್ಮೀರ್, ಏರ್ವಾಡಿ, ಮುತ್ತುಪೇಟೆ ಮೊದಲಾದ ಸ್ಥಳಗಳಿಗೆ ಪುಣ್ಯ ಬಯಸಿ ಹೊರಡುವುದು ಪ್ರವಾದಿ(ಸ)ರವರು ವಿರೋಧಿಸಿದ ಕಾರ್ಯವಾಗಿದೆ.

واستعينوا بالصبر والصلاة وإنها لكبيرة إلا على الخاشعين
الذين يظنون أنهم ملاقوا ربهم وأنهم إليه راجعون

ನೀವು ಸಹನೆ ಹಾಗೂ ನಮಾಝ್‌ನ ಮೂಲಕ (ಅಲ್ಲಾಹನ) ಸಹಾಯ ಯಾಚಿಸಿರಿ. ನಿಶ್ಚಯವಾಗಿಯೂ ಇದು ದೊಡ್ಡ (ಕಷ್ಟಕರ) ಕಾರ್ಯವೇ ಆಗಿದೆ. ಸದ್ಭಕ್ತರ ಹೊರತು. ಅಂದರೆ (ಆ ಭಕ್ತರು ಯಾರೆಂದರೆ) ತಾವು ತಮ್ಮ ಪ್ರಭುವಿನೊಂದಿಗೆ ಸಂಧಿಸಲಿಕ್ಕಿರುವವರೆಂದೂ ತಾವು ಅವನ ಕಡೆಗೇ ಮರಳಿ ಹೋಗುವವರೆಂದೂ ಭಾವಿಸಿಕೊಂಡಿರುವವರು.

(ಕುರ್‌ಆನ್ 2x45, 46)

إن هذا القرآن يهدي للتي هي أقوم ويبشر المؤمنين الذين يعملون الصالحات أن لهم أجرا كبيرا

ನಿಶ್ಚಯವಾಗಿಯೂ ಈ ಕುರ್‌ಆನ್‌ಅತ್ಯಂತ ನೇರವಾದುದರ ಕಡೆಗೆ ಮಾರ್ಗದರ್ಶನ ಮಾಡುತ್ತದೆ ಮತ್ತು ಸತ್ಕರ್ಮವೆಸಗುವ ಸತ್ಯವಿಶ್ವಾಸಿಗಳಿಗೆ ಬಹುದೊಡ್ಡ ಪ್ರತಿಫಲವಿದೆಯೆಂಬ ಶುಭವಾರ್ತೆಯನ್ನು ತಿಳಿಸುತ್ತದೆ.

(ಕುರ್‌ಆನ್ 17x9)

Printed, Published & Owned by RIYAZ AHMED on behalf of SATHYA PRAKASHANA PUBLICATION TRUST MANGALORE, Printed at Digantha Mudrana Ltd., Yeyyadi, Mangalore, D.K. Published at 20-2-155/1, 2nd Floor, Polymer House Bldg., Nellikai Road, Mangalore - 575 001, D.K.. D.T.P.: Sowmya Graphics, Mangalore. Editor: M.G. Muhammad